

# ಡಾ. ಕಾಶಿನಾಥ ಅಂಬಲಗಿ ಅವರ ಮೂರು ಕಾವ್ಯಾನುವಾದಗಳು – ಒಂದು ಅಧ್ಯಯನ

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ, ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು

ಅಶೋಕ ಡೊಂಗರೆ

ಮಾರ್ಗದರ್ಶಕರು

**ಡಾ. ಪ್ರಮಿಲಾ (ಪ್ರೇಮಾ) ಸಿರ್ಸೆ**

ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ



ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಡಿಸೆಂಬರ್ ೨೦೦೭

# ಪ್ರಮಾಣ ಪತ್ರ

**ಡಾ. ಕಾಶಿನಾಥ ಅಂಬಲಗಿ ಅವರ ಮೂರು ಕಾವ್ಯಾನುವಾದಗಳು - ಒಂದು ಅಧ್ಯಯನ** ಎಂಬ ನಿಬಂಧವನ್ನು ಡಾ. ಪ್ರೇಮಾ ಸಿರ್ಸೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಕ.ರಾ.ಶಿ ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಬೀದರ

ದಿನಾಂಕ : 19-12-07

ಅಶೋಕ ಡೊಂಗರೆ

ಎಂ.ಫಿಲ್. ವಿದ್ಯಾರ್ಥಿ

ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ

## ಮಾರ್ಗದರ್ಶಕರ ಪ್ರಮಾಣ ಪತ್ರ

**ಡಾ. ಕಾಶಿನಾಥ ಅಂಬಲಗಿ ಅವರ ಮೂರು ಕಾವ್ಯಾನುವಾದಗಳು - ಒಂದು ಅಧ್ಯಯನ** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಅಶೋಕ ಡೊಂಗರೆ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

Pramila

ಸ್ಥಳ : ಬೀದರ

ದಿನಾಂಕ : 19-12-07

ಡಾ. ಪ್ರಮಿಲಾ ಸಿರ್ಸೆ

ಮಾರ್ಗದರ್ಶಕರು

ಕ.ರಾ.ಶಿ. ಸಂಸ್ಥೆಯ



ಡಾ. ಕಾಶಿನಾಥ ಅಂಬಲಗೆಯವರು

# ಪರಿವಿಡಿ

ಪುಟ ಸಂಖ್ಯೆ

ಅಧ್ಯಾಯ – ೧

**ಅಧ್ಯಯನದ ಉದ್ದೇಶ :**

ಬೀದರ ಜಿಲ್ಲೆ ವಿವಿಧ ಧರ್ಮ, ಜನಾಂಗ, ಹಾಗೂ ಸಂಸ್ಕೃತಿಗಳ ಸಂಗಮ. ೧೨ನೆಯ ಶತಮಾನದ ಪುಣ್ಯ ಪುರುಷರ ನೆಲೆವೀಡಾಗಿದ್ದ ಈ ಪ್ರದೇಶ ಉಜ್ವಲ ಧಾರ್ಮಿಕ ಪರಂಪರೆಯ ಪರಿಸರ ಪಡೆದಿತ್ತು. ಅತ್ಯಂತ ಪ್ರಾಚೀನವಾದ ಐತಿಹಾಸಿಕ ಗುರುತುಗಳನ್ನು ಹೊಂದಿರುವ ಈ ಜಿಲ್ಲೆಯ ಇತಿಹಾಸ ಚಿತ್ರವು ಕ್ರಿ.ಶ. ಐದನೆಯ ಶತಮಾನದಿಂದ ಸುಸ್ಪಷ್ಟವಾಗಿದೆ.[1] ಮೊದಲು ಮೌರ್ಯರು, ಶಾತವಾಹನರು ಇಲ್ಲಿ ಅಧಿಪತ್ಯ ನಡೆಸಿದ್ದಾರೆ. ಆದರೆ ೮ನೆಯ ಶತಮಾನದ ರಾಷ್ಟ್ರಕೂಟರ ಕಾಲ ಜನರ ಸಾಂಸ್ಕೃತಿಕ ಬದುಕಿನ ಮೇಲೆ ಅಚ್ಚಳಿಯದ ಪ್ರಭಾವ ಉಳಿಸಿದೆ. ಕವಿರಾಜಮಾರ್ಗವು ಹೈದ್ರಾಬಾದ ಕರ್ನಾಟಕ ಪ್ರದೇಶದ ಕಲಬುರ್ಗಿ ಜಿಲ್ಲೆಯ ಮಳಖೇಡ ಗ್ರಾಮದಲ್ಲಿ ರಚನೆಗೊಂಡಿದೆ. ಇದೇ ವೇಳೆಯಲ್ಲಿ ರಚನೆಗೊಂಡಿರುವ ಬ್ರಾಜಿಷ್ಣು ಕವಿಯ ವಡ್ಡಾರಾಧನೆ ಕೃತಿ ಬೀದರ ಜಿಲ್ಲೆಯ ಹಳ್ಳೀಖೇಡ ಗ್ರಾಮದಲ್ಲಿ ರಚನೆಗೊಂಡಿದೆಯೆಂದು ಹಂ.ಪ.ನಾ. ಅವರು ಹೇಳಿದ್ದು ಇಲ್ಲಿ ಉಲ್ಲೇಖನೀಯ. ರಾಷ್ಟ್ರಕೂಟ ದೊರೆಗಳ ಪ್ರಭುತ್ವದಲ್ಲಿ ಕನ್ನಡ ಭಾಷೆ, ಕಲೆ, ಸಾಹಿತ್ಯದ ಬೆಳವಣಿಗೆಯು ಸಮೃದ್ಧವಾಗಿತ್ತು.

ಹತ್ತನೆಯ ಶತಮಾನವು ಬೀದರ ಜಿಲ್ಲೆಯ ಇತಿಹಾಸದಲ್ಲಿ ಅತ್ಯಂತ ಮಹತ್ವದ ಕಾಲವಾಗಿತ್ತು. ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಕಾಲದಲ್ಲಿ ಬೀದರದ ಉಜ್ವಲ ಇತಿಹಾಸದ ಮೊದಲ ಅಧ್ಯಾಯ ಪ್ರಾರಂಭವಾಯಿತು.

ಆರನೆಯ ವಿಕ್ರಮಾದಿತ್ಯ (ಕ್ರಿ.ಶ. ೧೦೭೬-೧೧೨೬) ಅಗ್ರಗಣ್ಯ ದೊರೆ ಮಹಾಶೂರ, ನಿಪುಣ, ಸಾಹಿತ್ಯ ಕಲೆ-ಕವಿಗಳ ಅಭಿಮಾನಿ ಈತನ ಕಾಲದಲ್ಲಿ ಮೇಧಾವಿಕವಿ ಬಿಲ್ಹಣ ಕಾಶ್ಮೀರದಿಂದ ಕಲ್ಯಾಣಕ್ಕೆ ಬಂದು 'ವಿಕ್ರಮಾಂಕದೇವ ಚರಿತೆ' ಎಂಬ ಗ್ರಂಥ ರಚಿಸಿದನು. ಪಂಡಿತ ವಿಜ್ಞಾನೇಶ್ವರ 'ಮಿತಾಕ್ಷರ' ಗ್ರಂಥ ನಿರ್ಮಿಸಿದನು. ಇವೆರಡೂ ಕೃತಿಗಳು ಭಾರತೀಯ ಇತಿಹಾಸ ಹಾಗೂ ಶಾಸ್ತ್ರ ವಾಙ್ಞಯಕ್ಕೆ ಬೀದರ ಜಿಲ್ಲೆ ನೀಡಿದ ಕೊಡುಗೆ ಎನಿಸಿವೆ. ವಿಕ್ರಮಾದಿತ್ಯನ ಕಾಲ ಆರ್ಥಿಕ ದೃಷ್ಠಿಯಿಂದ ಸಮೃದ್ಧಿವಾಗಿದ್ದು ಪ್ರಜೆಗಳ ಅಭ್ಯುದಯದ ಹಾಗೂ ನಾಡಿನ ಘನತೆ ಗೌರವವನ್ನು ಹೆಚ್ಚಿಸಿದ ಕಾಲವಾಗಿತ್ತು. ಜನಹಿತ ಕಾರ್ಯ ಮಾಡುವಲ್ಲಿ ಈ ದೊರೆ ಪ್ರಜಾನುಕಂಪವುಳ್ಳವನಾಗಿದ್ದನೆಂಬುದನ್ನು ನಂತರದ ಕಾಲದ ಹಲವು ಶಾಸನಗಳು

---

೧) ಡಾ. ಎಲ್.ಆರ್. ಕುಲಕರ್ಣಿ – ಬೀದರ ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆ – ಬೀದರ ಜಿಲ್ಲಾದರ್ಶನ ೧೯೯೫ – ಪುಟ ಸಂ. ೧

ತಿಳಿಸುತ್ತವೆ.[೨] ಒಟ್ಟಿನಲ್ಲಿ ಹಲವಾರು ದೃಷ್ಟಿಯಿಂದ ವೈಭವದ ಕಾಲವಾಗಿದ್ದ ಇದು ಕವಿ ಬಿಲ್ಹಣದಿಂದ – ನಾಸ್ತೀದತ್ತಿ ಭವಿಷ್ಯತಿ ಕ್ಷಿತಿ ತಲೆ ಕಲ್ಯಾಣ ಕಲ್ಪಂ ಪುರಂ ಎಂದು ಹೊಗಳುವಷ್ಟರ ಮಟ್ಟಿಗೆ ಸಾಂಸ್ಕೃತಿಕ ಹಿರಿಮೆಯನ್ನು ಪಡೆದಿತ್ತು.

ಬೀದರ ಜಿಲ್ಲೆಯ ಸಾಂಸ್ಕೃತಿಕ ಬದುಕಿನಲ್ಲಿ ೧೨ನೆಯ ಶತಮಾನ ಒಂದು ಪರ್ವಕಾಲ. ಈ ಸಂದರ್ಭದಲ್ಲಿ ಶತಶತಮಾನಗಳಿಂದ ಪುರೋಹಿತಶಾಹಿಯ ಕಪಿಮುಷ್ಠಿಯಲ್ಲಿ ಸಿಲುಕಿ ಅಂದಿನ ಯಜಮಾನ ಸಂಸ್ಕೃತಿಯ ತುಳಿತಕ್ಕೆ ಒಳಗಾದ ಶ್ರೀ ಸಾಮಾನ್ಯರನ್ನು ಅವುಗಳಿಂದ ಮುಕ್ತಗೊಳಿಸಿ ಒಂದು ಹಸನಾದ ಸಮಾಜವನ್ನು ಕಟ್ಟುವ ಉದ್ದೇಶದಿಂದ ಬಸವಾದಿ ಶಿವಶರಣರು ಒಂದೆಡೆ ಸೇರಿ ಅಂದಿನ ಜಡವಾದ ಬದುಕಿನ ಕುರಿತು ಚಿಂತನೆಯನ್ನು ಮಾಡಿ ಮಾನವ ಜೀವನಕ್ಕೆ ಹೊಸ ವಾಖ್ಯಾನವನ್ನು ಬರೆದರು ಅವರ ಆ ವ್ಯಾಖ್ಯಾನವೇ ವಚನಗಳಾಗಿ ಹೊರಹೊಮ್ಮಿದವು. ವಚನಗಳ ರಚನೆ ಎಂತಹವರನ್ನು ತನ್ನೆಡೆಗೆ ಸೆಳೆಯುತ್ತದೆ. ಈ ಮಾದರಿಯ ಸಾಹಿತ್ಯ ರಚನೆ ವಿಶ್ವದ ಸಾಹಿತ್ಯದಲ್ಲಿಯೇ ಅಪರೂಪವೆಂದು ಹೇಳಲಾಗಿತ್ತಿದ್ದು, ಇದು ವಿಶ್ವ ಸಾಹಿತ್ಯಕ್ಕೆ ಬೀದರ ಜಿಲ್ಲೆ ನೀಡಿದ ಕೊಡುಗೆಯಾಗಿದೆ ಎಂದು ಹೇಳಲು ಹೆಮ್ಮೆ ಎನಿಸುತ್ತದೆ.

೧೨ನೆಯ ಶತಮಾನದ ನಂತರ ೧೯ನೆಯ ಶತಮಾನದ ಮಧ್ಯಕಾಲದವರೆಗೆ ಬೀದರ ವಿಭಾಗದ ಸಾಹಿತ್ಯ ನಿರ್ಮಾಣ ಕಾರ್ಯವು ಹೆಚ್ಚು ಕಡಿಮೆ ಸ್ಥಗಿತವಾಗಿತ್ತೆಂದೇ ಹೇಳಬಹುದು. ಬಹಮನಿ ಆಡಳಿತದಿಂದ ಆರಂಭಗೊಂಡು ನಿಜಾಮ ಆಡಳಿತದ ಅಂತ್ಯದವರೆಗೆ ಕನ್ನಡ ಮತ್ತು ಕರ್ನಾಟಕವೆಂಬ ಮಾತು ಮರೆತು ಹೋಗುವಂತೆ ಉರ್ದು. ಮರಾಠಿ, ಮತ್ತು ತೆಲಗು ಭಾಷಾ ಪ್ರಭಾವ ಈ ಜಿಲ್ಲೆಯ ಮೇಲಾಯಿತು.[೩] ಇದರಿಂದ ಕನ್ನಡವು ಇಲ್ಲಿ ಮರೆಯಲ್ಲಿ ಬದುಕುವ ಸ್ಥಿತಿಗೆ ತಲುಪಿತ್ತು. ೧೯೪೮ರಲ್ಲಿ ಈ ಜಿಲ್ಲೆ ನಿಜಾಮನ ದೌರ್ಜನ್ಯದಿಂದ ಮುಕ್ತವಾದರೂ ೧೯೫೬ರವರೆಗೆ ಇಲ್ಲಿ ಕನ್ನಡದ ಸ್ಥಿತಿ ಶೋಚನೀಯವಾಗಿತ್ತು. ರಾಜ್ಯ ಪುನರ್ ವಿಂಗಡನೆಯ ನಂತರದವೂ ಅನೇಕ ವರ್ಷಗಳವರೆಗೆ ಇಲ್ಲಿ ಉರ್ದುವೇ ಮುಖ್ಯ ಭಾಷೆಯಾಗಿತ್ತು. ಹೀಗಾಗಿ ಈ ಕಾಲದಲ್ಲಿ ಸಾಹಿತ್ಯ ರಚನೆಯಂತೂ ದೂರದ ಮಾತೇ ಸರಿ. ಇಲ್ಲಿ ಕನ್ನಡವು ಜೀವಂತವಾಗಿ ಉಸಿರಾಡಿದ್ದು ಜನಪದರಲ್ಲಿ ಮಾತ್ರ ಜಾನಪದ ಹಾಡು, ಬಯಲಾಟ, ಕೋಲಾಟ, ತತ್ವಪದಗಳು ಮೊದಲಾದ ಜನಪದ ಸಂಸ್ಕೃತಿ ಹಾಗೂ ಸಾಹಿತ್ಯದ ಮೂಲಕ ಕನ್ನಡವನ್ನು ಉಳಿಸಿ ಬೆಳೆಸಲಾಯಿತು. ಈ ಪ್ರಕ್ರಿಯೆ ೨೦ನೆಯ ಶತಮಾನದ ಪೂರ್ವಾರ್ಧದವರೆಗೂ

---

೨) ಸಂ. ಡಾ. ಸೋಮನಾಥ ಯಾಳವಾರ – ಬೀದರ ಜಿಲ್ಲಾದರ್ಶನ ೨೦೦೫ – ಪುಟ ಸಂ. ೪
೩) ಸಂ. ಡಾ. ಜಗನ್ನಾಥ ಹೆಬ್ಬಾಳೆ ಬೀದರ ಜಿಲ್ಲಾದರ್ಶನ ೧೯೯೭ – ಪುಟ ಸಂ. ೭೬

ಮುಂದುವರೆಯಿತು. ಅಂತಹ ಸಂದರ್ಭದಲ್ಲಿ ಇಲ್ಲಿ ಮರಕುಂದಿ ಬಸವಣಪ್ಪ, ಸಿದ್ದಪ್ರಭು, ಶಿಲ್ಲಪ್ಪಕವಿ, ಮಂಕಾಲಹಣಮಂತಪ್ಪನಂತಹ ಕೆಲವರು ತತ್ವಪದ ಹಾಗೂ ಭಜನೆ ಹಾಡುಗಳನ್ನು ರಚಿಸಿದರು.

೧೯೬೦ರಲ್ಲಿ ಈ ಜಿಲ್ಲೆಯಲ್ಲಿ ಬಿ.ಎಂ. ಶ್ರೀಯಂತೆ ಮೊದಲ ಆಧುನಿಕ ಕೃತಿ ರಚಿಸಿದವರು – ಮಾಣಿಕರಾವ ಧನಾಶ್ರೀಯವರು. ನಂತರ ಇಲ್ಲಿಯ ಸಾಹಿತ್ಯದಲ್ಲಿ ಹೊಸ ಸೃಷ್ಠಿ ಆರಂಭವಾಹಿತು. ಪಂಚಾಕ್ಷರಿ ಪುಣ್ಯಶೆಟ್ಟಿ ದಿ. ಬಸವರಾಜ ಸೈನೀರ್, ದೇಶಾಂಶ ಹುಡಗಿ, ಎಂ.ಜಿ. ಗಂಗನಪಳ್ಳಿ, ಬಾಲಚಂದ್ರ ಜೈಶೆಟ್ಟಿ, ಜೆ.ಬಿ. ವಿಸಾಜಿ, ಕೆ.ಜಿ. ಮಾಶೆಟ್ಟಿ, ವಿರೇಂದ್ರ ಸಿಂಪಿ, ಪ್ರೇಮಾ ಸಿರ್ಸೆ, ವಿಜಯಶ್ರೀ ಸಬರದ, ಬಿ.ಎಸ್. ಖೂಬಾ, ಜಗನ್ನಾಥ ಹೆಬ್ಬಾಳೆ, ಸೋಮನಾಥ ಯಾಳವಾರ, ವೀರಶೆಟ್ಟಿ ಬಾವುಗೆ ಮುಂತಾದವರು ಇಲ್ಲಿಯ ಪ್ರಮುಖ ಬರಹಗಾರರು.

ಶಿಕ್ಷಣ ಕ್ಷೇತ್ರಗಳಲ್ಲಿ ಇಂದು ಪ್ರಮುಖವಾಗಿರುವ ಸಂಶೋಧನೆಯು ಬಹುಮುಖಿ ಅಧ್ಯಯನವಾಗಿ ಬೆಳೆಯುತ್ತಿದೆ. ಇತಿಹಾಸ, ಸಂಸ್ಕೃತಿ, ಸಮಾಜಮುಖಿ ಅಧ್ಯಯನಗಳೊಂದಿಗೆ, ಸಾಹಿತ್ಯ ಕ್ಷೇತ್ರದಲ್ಲಿ ವಸ್ತುನಿಷ್ಠ ಅಧ್ಯಯನ ಹಾಗೂ ವ್ಯಕ್ತಿನಿಷ್ಠ ಅಧ್ಯಯನ ಶಾಖೆಗಳು ಪ್ರಧಾನವಾದ ಆಯ್ಕೆ ಕ್ಷೇತ್ರಗಳೆನಿಸಿವೆ. ಒಬ್ಬ ಲೇಖಕನ ಬೌದ್ಧಿಕತೆಯ ವಿಸ್ತರಣೆಯ ನೆಲೆಯಲ್ಲಿ ಈ ಅಧ್ಯಯನವು ಮಹತ್ವವೆನಿಸುತ್ತದೆ. ವ್ಯಕ್ತಿಯಿಂದ ಅಧ್ಯಯನಶೀಲತೆ, ಸಹನೆ, ಆತನ ದೀರ್ಘಕಾಲದ ಪರಿಶ್ರಮ, ನಿರಂತರತೆ ಮುಂತಾದವುಗಳನ್ನು ಸಂಶೋಧನೆಯ ಶಿಸ್ತು ಬಯಸುವುದರಿಂದ ಒಬ್ಬ ಲೇಖಕನ ಬದುಕು ಬರಹದ ಅಧ್ಯಯನವು ಅವಶ್ಯವೆನಿಸುತ್ತದೆ. ಇಂಥವರಲ್ಲಿ ಡಾ. ಕಾಶೀನಾಥ ಅಂಬಲಗಿಯವರು ಒಬ್ಬರು. ಅವರು ಕವಿಯಾಗಿ, ವಿಮರ್ಶಕರಾಗಿ, ಸಂಶೋಧಕರಾಗಿ ಪ್ರಗತಿಪೊರ ಚಿಂತಕರಾಗಿ ಹೆಚ್ಚಾಗಿ ಶ್ರೇಷ್ಠ ಅನುವಾದಕರಾಗಿ ಪ್ರಸಿದ್ಧರಾದವರು.

ಸಾಹಿತ್ಯ ಜನಪರವಾಗುತ್ತಿರುವ, ಇಂದಿನ ಕಾಲದಲ್ಲಿ ಬದುಕು ಬರಹಗಳ ನಡುವೆ ಸಾವಯವ ಸಂಬಂಧ ಹೊಂದಿರುವ ಡಾ. ಅಂಬಲಗೆಯಂತಹ ಲೇಖಕರನ್ನು ಕುರಿತಾಗಿ ಸಮಗ್ರ ಅಧ್ಯಯನ ನಡೆಯಬೇಕಾಗಿದೆ. ಬದುಕಿನ ಅನೇಕ ವೈರುದ್ಯಗಳ ಮಧ್ಯೆ ಅವರು ತಾವು ನಂಬಿದ ಜೀವನ ಮೌಲ್ಯಗಳನ್ನು ಅಭಿವ್ಯಕ್ತಗೊಳಿಸುತ್ತ ಮುನ್ನಡೆದಿರುವ ಮಹತ್ವದ ಕವಿಯಾಗಿದ್ದಾರೆ. ಕನ್ನಡ ಹಾಗೂ ಹಿಂದಿ ಭಾಷೆಗಳೆರಡರಲ್ಲೂ ಪಾಂಡಿತ್ಯವನ್ನು ಹೊಂದಿ ಉಭಯ ಸಾಹಿತ್ಯ ಕ್ಷೇತ್ರಕಷ್ಟೇ ಅಲ್ಲ, ಕನ್ನಡ ಸಾಹಿತ್ಯದ ಮುಖ್ಯ ಕಾವ್ಯಪ್ರಕಾರಕ್ಕೆ ಧನಿಯಾಗಿ, ಹೈದ್ರಾಬಾದ ಕರ್ನಾಟಕದ ಪ್ರಮುಖ ಕವಿಗಳಲ್ಲಿ ಪ್ರಧಾನವೆನಿಸಿ ಬದುಕು ಬರಹಗಳು ಮುಂಬರುವ ಜನಾಂಗಕ್ಕೆ ಪ್ರೇರಣೆ ನೀಡುತ್ತವೆ.

ಸೃಜನಶೀಲ ಲೇಖಕರಾಗಿರುವ ಡ್ರಾ ಕಾಶಿನಾಥ ಅಂಬುಲಗೆಯವರ ಜೀವನ ಹಾಗೂ ಅವರ ಕೃತಿಗಳಲ್ಲಿ ಮೂಡಿನಿಂತಿರುವ ಬದುಕಿನ ವಿವರಗಳನ್ನು ಗಮನಿಸಿದಾಗ

ಅವುಗಳಲ್ಲೊಂದು ಸಮನ್ವತೆಯನ್ನು ಕಾಣಬಹುದಾಗಿದೆ. ಅವರ ಬರಹದಲ್ಲಿ ನಮ್ಮ ಸಂಸ್ಕೃತಿಯ ಬೇರುಗಳನ್ನು ಗುರುತಿಸಬಹುದು.

ಅವರ ಕೃತಿಗಳ ಮೂಲಕ ಅವರ ಜೀವನ ಚರಿತ್ರಯನ್ನು ಕಟ್ಟುವುದರೊಂದಿಗೆ ನಮ್ಮ ಪ್ರದೇಶದ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಳ್ಳಬಹುದಾಗಿದೆ. ಈ ದೃಷ್ಠಿಯಿಂದ ಡಾ. ಅಂಬಲಗೆಯವರ ಕೃತಿಗಳ ಅಧ್ಯಯನ ಅವಶ್ಯಕವೆನಿಸುತ್ತದೆ.

'ಸಂತೋಂ ಔರ ಶಿವಶರಣೋಂಕೆಕಾವ್ಯಮೆ ಸಾಮಾಜಿಕಚೇತನಾ' ಎಂಬುದು ಅವರ ಪಿಎಚ್.ಡಿ ಮಹಾಪ್ರಬಂಧ, ಇಲ್ಲಿ ಸಂತರ ಹಾಗೂ ಬಸವಾದಿ ಶಿವಶರಣರ ಕಾವ್ಯವಚನಗಳ ತೌಲನಿಕ ಅಧ್ಯಯನದ ಮೂಲಕ ವಚನ ಸಾಹಿತ್ಯದಲ್ಲಿರುವ ಪ್ರಗತಿಪರ ವಿಚಾರಗಳನ್ನು ಹಿಂದಿ ಭಾಷೀಕರಿಗೆ ತುಂಬಾ ಅಚ್ಚುಕಟ್ಟಾಗಿ ಪರಿಚಯಿಸಿದ್ದಾರೆ. ತೌಲನಿಕ ಸಂಶೋಧನಾ ಕ್ಷೇತ್ರಕ್ಕೆ ಇದೊಂದು ಉಪಯುಕ್ತ ಕೊಡುಗೆಯಾಗಿದೆ.

ಕನ್ನಡದ ಪ್ರಸಿದ್ಧ ಲೇಖಕರಾದ ಜಿ.ಎಸ್.ಶಿವರುದ್ರಪ್ಪ, ಶಾಂತರಸ, ಚೆನ್ನವೀರ ಕಣವಿ, ಶೈಲಜಾ ಉಡಚಣರ ಕೃತಿಗಳು, ಲಂಕೇಶರ 'ಕ್ರಾಂತಿ ಬಂತು ಕ್ರಾಂತಿ' ನಾಟಕ ಸಾರಾ, ಅಬೂಬಕರರ ಚಂದ್ರಗಿರಿ ತೀರದಲ್ಲಿ ಕಾದಂಬರಿಯನ್ನು ಹಿಂದಿಭಾಷೆಗೆ ಅನುವಾದಿಸಿದ್ದಾರೆ. ಡಾ. ರಾಮಧಾರಿಸಿಂಹ ದಿವಾಕರ ಕಥೆಗಳು ಹಾಗೂ ಕೇಶವರ ಕಥೆಗಳು ಹಿಂದಿ ಭಾಷೆಯಿಂದ ಕನ್ನಡಕ್ಕೆ ಅನುವಾದಿಸಿದ್ದಾರೆ. ಹಿಂದಿ-ಕನ್ನಡ ಎರಡೂ ಭಾಷೆಗಳಿಗೆ ಅವರೊಬ್ಬ ಸಾಂಸ್ಕೃತಿಕ ರಾಯಭಾರಿಯಾಗಿ ಕಾರ್ಯನಿರ್ವಹಿಸಿದ್ದು ಗಮನಾರ್ಹ. ಒಂದು ದಶಕದಲ್ಲಿ ನಡೆದ ಪಂಜಾಬಿನಲ್ಲಿ ಸಾವುನೋವುಗಳ ಘಟನಾವಳಿಗಳ ಕುರಿತು ಎರಡುನೂರು ಮಿನಿ ಕವಿತೆಗಳನ್ನು ಅವರು ಇತ್ತೀಚೆಗೆ ಕನ್ನಡಕ್ಕೆ ಅನುವಾದಿಸಿದ್ದು, ಅನುವಾದ ಸಾಹಿತ್ಯದಲ್ಲೊಂದು ಮಹತ್ವದ ಸಂಗತಿಯಾಗಿದೆ.

ಇವರ ಓದಿ ಅಳುವುದು, ಕೋಗಿಲೆ ಅಳುತಿದೆ ಹಾಗೂ ಸಮಕಾಲೀನ ಪಂಜಾಬಿ ಕವಿತೆಗಳು ಡಾ. ಕಾಶಿನಾಥ ಅಂಬಲಗೆಯವರ ಮಹತ್ವದ ಅನುವಾದ ಕೃತಿಗಳಾಗಿದ್ದು ಅವರ ಸೊಪಜ್ಞತೆಯ ಸೃಷ್ಠಿ ಹಾಗೂ ಅನುವಾದ ದೃಷ್ಠಿ ಎರಡರಿಂದಲೂ ಗಮನಾರ್ಹವಾಗುತ್ತದೆ. ಬೀದರನ ವಿಶಿಷ್ಠ ಕನ್ನಡ ಭಾಷೆಯ ಶೈಲಿ ಹಾಗೂ ಸತ್ವಗಳನ್ನು ಬಳಸಿಕೊಂಡಿರುವ ಅವರ ಕಾವ್ಯಾನುವಾದವು ಇಲ್ಲಿ ತನ್ನ ಮೈಬಿಚ್ಚಿಕೊಂಡು ನಲಿದಿದ್ದು ಓದುಗರ ಕಣ್ಮನ ಸೆಳೆಯುತ್ತದೆ.

ತಮ್ಮ ಸಾಹಿತ್ಯಾಭಿವ್ಯಕ್ತಿಯ ಮೂಲಕ ಓದುಗರನ್ನು ಆಕರ್ಷಿಸಲು ನಡೆಸಿದ ಪ್ರಯೋಗಗಳು ಅವರ ಪ್ರತಿಭೆಯನ್ನು ಎತ್ತಿ ತೋರಿಸುತ್ತದೆ. ಅವರು ಅನುವಾದ ಆರಿಸಿಕೊಂಡ ಕೃತಿಗಳ ಆಯ್ಕೆ ಬಳಸುವ ಭಾಷೆ, ಅಭಿವ್ಯಕ್ತಿ ಕ್ರಮ, ಪ್ರಜ್ಞಾಮೂರ್ವಕವಾಗಿರುವ ಕಾವ್ಯ ಸಂದೇಶಗಳು ಹೆಚ್ಚು ವಾಸ್ತವಿಕ ಹಾಗೂ ಶರಣರ ಕ್ರಾಂತಿಭೂಮಿ ಬಸವ ಕಲ್ಯಾಣದ ಒಡಲಲ್ಲಿ ಹುಟ್ಟಿ ಬೆಳೆದ ಅವರ ಬೀದರಿನ ವಿಶಿಷ್ಟ ಭಾಷಾ ಶೈಲಿ ಓದುಗರ ಗಮನ ಸೆಳೆಯುತ್ತಾ ಜನಪರ ನೆಲೆಯಲ್ಲಿ ಬೆಳೆದು ಬಂದಿವೆ.

ಸಾಹಿತ್ಯಾಭ್ಯಾಸದ ದೃಷ್ಟಿಯಿಂದ ತೀರಾ ಆಸಕ್ತಿದಾಯಕವಾಗಿರುವ ಅನ್ಯಭಾಷೆಯ ಕಾವ್ಯ, ನಾಟಕ ಹಾಗೂ ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿ ಅವುಗಳ ಮಹತ್ವವನ್ನು ತಿಳಿಸಲು ಪ್ರಯತ್ನಿಸಿದ್ದಾರೆ. ತಮ್ಮ ಅನುವಾದ ಸಾಹಿತ್ಯದಲ್ಲಿ ವಸ್ತು, ಭಾವ, ಭಾಷೆ ಹಾಗೂ ಘಟನೆಗಳ ವೈವಿಧ್ಯತೆಯ ಮೂಲಕ ಗಮನ ಸೆಳೆಯುವ ಕೃತಿಗಳನ್ನು ಅವರು ರಚಿಸಿದ್ದಾರೆ. ಈ ಅಧ್ಯಯನ ಕೇವಲ ಒಬ್ಬ ಕವಿಯ ಜೀವನದ ಅಧ್ಯಯನವಾಗದೆ, ವಿವಿಧ ಪರಿಸರಗಳ ಸಾಂಸ್ಕೃತಿಕ ಅಧ್ಯಯನವಾಗುತ್ತದೆ. ಈ ದೃಷ್ಟಿಯಲ್ಲಿ ಡಾ. ಕಾಶಿನಾಥ ಅಂಬಲಗೆಯವರ ಮೂರು ಅನುವಾದ ಕೃತಿಗಳ ಅಧ್ಯಯನ ಅತ್ಯಂತ ಮಹತ್ವದ್ದೆನಿಸುತ್ತದೆ.

ಬಂಡಾಯ ಕಾಲ ಘಟ್ಟದಲ್ಲಿ ತಮ್ಮ ಮೊದಲ ಕೃತಿ ೩೫ ಕವನಗಳು ಕವನ ಸಂಕಲನದ ಮೂಲಕ ಸಾಹಿತ್ಯ ಕ್ಷೇತ್ರಕ್ಕೆ ಕಾಲಿಟ್ಟ ಡಾ. ಕಾಶಿನಾಥ ಅಂಬಲಗಿಯವರು ಹಲವು ನೆಲೆಗಳಲ್ಲಿ ಚಿಂತನಾಶೀಲ ಬರಹಗಾರರಾಗಿದ್ದಾರೆ. ವಾಸ್ತವ ಬದುಕಿಗೆ ಬೇಕಾದ ಇಂದಿನ ಜೀವನಾವಶ್ಯಕತೆಗಳನ್ನು ಕುರಿತು ರಚಿಸಿದ ಅವರ ಒಟ್ಟು ಸಾಹಿತ್ಯ ಜನಪರ ಕಾಳಜಿಯುಳ್ಳದ್ದಾಗಿದೆ. ಅವರ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಹಾಗೂ ವೈಜ್ಞಾನಿಕ ಚಿಂತನೆಗಳು ಅವರ ಅಭಿವ್ಯಕ್ತಿ ಶೈಲಿಯ ಒಳನೋಟದಲ್ಲಿ ಎದ್ದು ಕಾಣುತ್ತವೆ.

ಅನುವಾದಿತ ಕೃತಿಗಳಲ್ಲಿ ಹುದುಗಿರುವ ಆಶಯಗಳ ಕುರಿತು ಅಧ್ಯಯನ ಮಾಡುವುದು ಇಲ್ಲಿನ ಉದ್ದೇಶವಾಗಿದೆ. ಆಧುನಿಕ ಕನ್ನಡ ಸಾಹಿತ್ಯ ಸಂವರ್ಧನೆಯಲ್ಲಿ ಪ್ರಮುಖ ಪಾತ್ರವಹಿಸಿ, ಭಾರತೀಯ ಇತರ ಭಾಷಾ ಸಾಹಿತ್ಯಗಳ ತೌಲನಿಕ ಅಧ್ಯಯನದ ದೃಷ್ಟಿಯಿಂದ ಪ್ರಮುಖವಾಗುವ ಇವರ ಅನುವಾದ ಸಾಹಿತ್ಯವು ಸಂಶೋಧನಾ ದೃಷ್ಟಿಯಿಂದ ಮಹತ್ವದ್ದಾಗಿದ್ದು ಅದನ್ನು ಅಧ್ಯಯನಕ್ಕೆ ಆರಿಸಿಕೊಳ್ಳಲಾಗಿದೆ. ಈ ಮೂಲಕ ಅವರ ಅನುವಾದಿತ ಕೃತಿಗಳಲ್ಲಿ ಹುದುಗಿರುವ ಆಶಯಗಳ ಕುರಿತು ಅಧ್ಯಯನ ಮಾಡುವುದು ಇಲ್ಲಿನ ಉದ್ದೇಶವಾಗಿದೆ.

ಡಾ. ಕಾಶಿನಾಥ ಅಂಬಲಗೆಯವರ ಇದುವರೆಗೆ ಸಮಗ್ರವಾದ ಅಧ್ಯಯನ ನಡೆದಿಲ್ಲ. ಅವರ ಕೃತಿಗಳ ಕುರಿತು ಬಿಡಿಬಿಡಿಯಾಗಿ ಅಲ್ಲಲ್ಲಿ ಲೇಖನಗಳು ಬಂದಿದ್ದು, ಅವು ಕೇವಲ ವಿಮರ್ಶೆಗೆ ಮಾತ್ರ ಮೀಸಲಾಗಿವೆ. ಇಡಿಯಾಗಿ ಅವರ ಸಾಹಿತ್ಯ ಹಾಗೂ ಬದುಕನ್ನು ಕುರಿತು ಅಧ್ಯಯನ ಮಾಡುವುದು ಅವಶ್ಯಕವೆನಿಸಿದರೂ ಸಹ, ಇಲ್ಲಿ ನಾನು ಎಂ.ಫಿಲ್ ಅಧ್ಯಯನಕ್ಕಾಗಿ ಅದರ ವ್ಯಾಪ್ತಿ ವಿಸ್ತೃತವಾಗುವ ಭೀತಿಯಿಂದಾಗಿ ಕೇವಲ ಅವರ ಮೂರು ಅನುವಾದಿತ ಕೃತಿಗಳನ್ನು ಮಾತ್ರ ಅಧ್ಯಯನಕ್ಕಾಗಿ ಆರಿಸಿಕೊಂಡಿದ್ದಾನೆ.

೧) ಕೋಗಿಲೆ ಅಳುತಿದೆ

೨) ಓದಿ ಅಳುವುದು

೩) ಸಮಕಾಲೀನ ಪಂಜಾಬಿ ಕವಿತೆಗಳು

ಡಾ. ಕಾಶಿನಾಥ ಅಂಬಲಗೆಯವರನ್ನು ವೈಯಕ್ತಿಕವಾಗಿ ಸಂದರ್ಶಿಸಿ, ಹಲವು ಪ್ರಶ್ನಾವಳಿಗಳನ್ನು ತಯಾರಿಸಿ ಅವುಗಳಿಗೆ ಉತ್ತರ ಪಡೆದಿರುವೆನು. ಅವರ ಸೃಜನಾತ್ಮಕ ಕೃತಿಗಳನ್ನು ಅನುವಾದಿತ ಕೃತಿಗಳನ್ನು ಮತ್ತು ಅವುಗಳಿಗೆ ಬಂದ ಹಲವು ವಿದ್ವಾಂಸರ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ. ಹೊಸಗನ್ನಡ ಸಾಹಿತ್ಯದ ವಿಮರ್ಶಾತ್ಮಕ ಅಧ್ಯಯನ ಹಾಗೂ ಕನ್ನಡದ ಅನುವಾದ ಸಾಹಿತ್ಯದ ಹಿನ್ನಲೆಯಲ್ಲಿ ಅವರ ಮೂರು ಅನುವಾದಿತ ಕೃತಿಗಳನ್ನು ವಿಶ್ಲೇಷಣೆಗೊಳಪಡಿಸಲಾಗಿದೆ.

ಪ್ರಸ್ತುತ ಪ್ರಬಂಧದಲ್ಲಿ ಅಂಬಲಗಿಯವರ ಜೀವನ ಮತ್ತು ಸಾಧನೆ, ಸಾಹಿತ್ಯ ಕ್ಷೇತ್ರದಲ್ಲಿ ಅವರು ಸಾಗಿದ ಹೆಜ್ಜೆ ಗುರುತುಗಳನ್ನು ಗುರುತಿಸುತ್ತ ಅವರ ಅನುವಾದ ಸಾಹಿತ್ಯದ ಅಧ್ಯಯನಕ್ಕೆ ಸೀಮಿತಗೊಳಿಸಲಾಗಿದೆ. ಈ ಸಂಶೋಧನೆಯ ಉದ್ದೇಶ ವ್ಯಾಪ್ತಿಯು ಮುಂದಿನ ಐದು ಅಧ್ಯಯನಗಳಲ್ಲಿ ವಿಸ್ತರಿಸಲಾಗಿದೆ.

ಅಧ್ಯಾಯ : ೨

## ಡಾ. ಕಾಶಿನಾಥ ಅಂಬಲಗಿಯವರ ಜೀವನ ಮತ್ತು ಸಾಧನೆ

ಒಂದು ಕೃತಿಯ ಅಧ್ಯಯನ ಮಾಡುವಾಗ ಕೃತಿಕಾರನ ಜೀವನದ ಕುರಿತು ಚಿಂತನೆ ಮಾಡುವದು ಅವಶ್ಯಕವೆಂಬುದು ವಿದ್ವಾಂಸರ ಅಭಿಪ್ರಾಯ. ವಿ.ಕೃ ಗೋಕಾಕರು "ಸಾಹಿತಿಯ ಜನಾಂಗವಾವುದು ಎಂದರೆ ಅವನು ಬಾಳಿದ ಕಾಲ, ಬೆಳೆದ ಆವರಣದ ಪರಿಚಯ ಹಾಗೂ ಅವರ ವ್ಯಕ್ತಿತ್ವ ಈ ವಿಷಯಗಳನ್ನು ಅಭ್ಯಾಸಿಸಿದರೆ ಮಾತ್ರ ನಾವು ಓರ್ವ ಸಾಹಿತಿಯ ಕೃತಿಗಳನ್ನು ತಿಳಿಯುವುದು ಸಾಧ್ಯವಾಗಬಹುದು"[೧] ಎನ್ನುತ್ತಾರೆ. ಸಾಹಿತಿಯು ಕೇವಲ ಒಬ್ಬ ವ್ಯಕ್ತಿಯಾಗಿರದೇ ಆತನು ತಾನು ಬದುಕುವ ಪ್ರದೇಶದ ಸಾಂಸ್ಕೃತಿಕ ಪ್ರತಿನಿಧಿಯಾಗಿ ನಿಲ್ಲುತ್ತಾನೆ. ತನ್ನ ಕೃತಿಗಳ ಮೂಲಕ ಸಮಕಾಲೀನ ಸಾಮಾಜಿಕ ವ್ಯವಸ್ಥೆಯ ವೈರುಧ್ಯಗಳನ್ನು ಹಾಗೂ ನಾಡಿನ ಇತಿಹಾಸವನ್ನು ಮತ್ತು ಜನ ಸಾಮಾನ್ಯರ ಬದುಕಿನ ಚರಿತ್ರೆಯನ್ನು ದಾಖಲಿಸುತ್ತಾನೆ. ಜೊತೆಗೆ ಒಂದಿಲ್ಲೊಂದು ರೀತಿಯಿಂದ ಕೃತಿಯಲ್ಲಿ ತಾನೂ ಕಾಣಿಸಿಕೊಳ್ಳುತ್ತಾನೆ. ಅದಕ್ಕಾಗಿಯೇ ಆರ್.ಸಿ. ಹಿರೇಮಠರು "ಕಾವ್ಯ ಕವಿಯ ಕರ್ಮ, ಅದು ಅಂಕುರಿಸಿ ಮೊಳೆತು ಫಲಿಸುವುದು ಕವಿಯ ಮನದ ಕೊನೆಯಲ್ಲಿ, ಆತನ ಸಂಸ್ಕಾರ, ಪರಿಸರ, ವೈಯಕ್ತಿಕ ಒಲವು ಆತನ ಮನೋಧರ್ಮ ಅವನ ಕಾವ್ಯವನ್ನು ರೂಪಿಸುತ್ತದೆ."[೨] ಎನ್ನುತ್ತಾರೆ.

ಒಬ್ಬ ಕವಿ ತನ್ನ ಕಾವ್ಯ ಸೃಷ್ಠಿಯ ಮೂಲಕ ತಾನು ಆನಂದವನ್ನು ಹೊಂದುವುದರ ಜೊತೆಗೆ ಸಹೃದಯರಿಗೂ ಆನಂದವನ್ನು ನೀಡುತ್ತಾನೆ. ಸಾಮಾಜಿಕ ಜೀವಿ ಎನಿಸುವ ಅವನು ಇಂತಹ ವಿಶಿಷ್ಠ ವ್ಯಕ್ತಿತ್ವವನ್ನು ತಾನು ಬದುಕಿನ ಪರಿಸರದಿಂದ ಪಡೆದುಕೊಳ್ಳುತ್ತಾನೆ. ಡಾ. ಅಂಬಲಗಿಯವರ ಕೃತಿಗಳ ಅಧ್ಯಯನಕ್ಕೆ ತೊಡಗುವ ಮುನ್ನ ಅವರ ಪ್ರಸಿದ್ಧಿಗೆ ಕಾರಣವಾದ ಹಿನ್ನಲೆಯನ್ನು ಒದಗಿಸಿದ ಅವರ ಜೀವನ-ಸಾಧನೆಯನ್ನು ಮೊದಲು ವಿವರವಾಗಿ ಇಲ್ಲಿ ಗಮನಿಸಬಹುದು.

**ಬಾಲ್ಯ ಹಾಗೂ ಶಿಕ್ಷಣ :**

ಡಾ. ಕಾಶಿನಾಥ ಅಂಬಲಗಿಯವರು ಬೀದರ ಜಿಲ್ಲೆಯ ಬಸವಕಲ್ಯಾಣ ತಾಲ್ಲೂಕಿನ ಇತಿಹಾಸ ಪ್ರಸಿದ್ಧ ಮುಚಳಂಬಿಯಲ್ಲಿ ದಿನಾಂಕ ೧೦-೦೭-೧೯೪೭ ರಲ್ಲಿ ಜನಿಸಿದರು.

---

೧) ವಿ.ಕೃಗೋಕಾಕ ಸಾಹಿತ್ಯದಲ್ಲಿ ಪ್ರಗತಿ ೧೯೪೪ರಲ್ಲಿ - ಪುಟ ಸಂ. ೪೬

೨) ಆರ್. ಸಿ. ಹಿರೇಮಠ - ಸಾಹಿತ್ಯ ವಿಮರ್ಶೆ ೧೯೬೯ - ಪುಟ ಸಂ. ೮೯

ಕಾಶಿನಾಥರು ವಿದ್ಯಾರ್ಥಿ ದಿಶೆಯಿಂದಲೇ ಪ್ರತಿಭಾನ್ವಿತರು. ಮುಚಳಂಬಿಯ ಅಂಬಲಗಿ ಮನೆತನದ ರಾಚಪ್ಪ ಇವರ ತಂದೆ, ಗುರಮ್ಮ ಇವರ ತಾಯಿ, ರಾಮಲಿಂಗಪ್ಪ ಅಂಬಲಗೆ ಇವರ ಅಣ್ಣನವರು. ಶಿಕ್ಷಕರಾಗಿದ್ದ ಈ ಅಣ್ಣನವರ ನೇತೃತ್ವದಲ್ಲಿಯೇ ಕಾಶಿನಾಥರು ಸರಿಯಾದ ಶಿಕ್ಷಣ ಪಡೆದರು. ಸ್ವತಃ ಬರಹಗಾರರಾಗಿದ್ದ ರಾಮಲಿಂಗಪ್ಪನವರು ಅಭಂಗಹಾಡು, ಬುಲಾಯಿ ಹಾಡುಗಳನ್ನು ಬರೆದವರು. ಅಣ್ಣನ ಗರಡಿಯಲ್ಲಿ ಬೆಳೆದ ಇವರು ಪ್ರಾಥಮಿಕ ಶಿಕ್ಷಣವನ್ನು ಮುಚಳಂಬದಲ್ಲಿ ಪ್ರೌಢಶಾಲಾ ಶಿಕ್ಷಣವನ್ನು ಬೀದರದಲ್ಲಿ ಮುಗಿಸಿದರು. ಈ ವೇಳೆಯಲ್ಲಿ ತಮ್ಮ ಶಾಲೆಯ ಹಸ್ತ ಲಿಖಿತ ಮಾಗ್ಜಿನ್ ಸಂಪಾದಕರಾಗಿ ಕಾರ್ಯನಿರ್ವಹಿಸಿದ್ದು ವಿಶೇಷವೆನ್ನಬಹುದು. ಇದು ಆ ಜಾಣ ವಿದ್ಯಾರ್ಥಿಗೆ ಸಂದ ಮೊದಲ ಗೌರವ ಎನ್ನಬಹುದು.

ಹಸ್ತಲಿಖಿತ ವಾರ್ಷಿಕ ಸಾಹಿತ್ಯ ಪತ್ರಿಕೆಯಾಗಿದ್ದ ಇದರಲ್ಲಿ ಅಂಬಲಗಿಯವರ ಒಂದು ಕವಿತೆ ಪ್ರಕಟವಾಗಿತ್ತು. ಆ ಕವಿತೆಯಲ್ಲಿ ತನ್ನ ಶಾಲೆ ಹಾಗೂ ಗುರುವೃಂದವನ್ನು ಗೌರವಿಸುವ ಭಾವನೆಯಿದ್ದು, ನಾವೆಲ್ಲ ವಿದ್ಯಾರ್ಥಿಗಳು ಶಾಲೆಗೆ ಹೆಸರು ಕೀರ್ತಿ ತರೋಣವೆಂಬ ಆಶಯ ಈ ಕವಿತೆಯದಾಗಿತ್ತು. ೧೯೬೩ರಿಂದ ೧೯೬೫ರ ಮಧ್ಯದಲ್ಲಿ ತಾವು ಬರೆದ ಕೆಲವು ಬಿಡಿ ಕವನಗಳನ್ನು ಕರ್ಮವೀರ, ಪ್ರಪಂಚದಂತಹ ವಾರಪತ್ರಿಕೆಗಳಲ್ಲಿ ಪ್ರಕಟಿಸಿದರು. ಇದಕ್ಕೆಲ್ಲಾ ಅವರ ಅಣ್ಣನ ಪ್ರೋತ್ಸಾಹವೇ ಕಾರಣವೆಂದು ಕಾಶಿನಾಥರು ಎದೆತುಂಬಿ ಹೇಳಿಕೊಳ್ಳುತ್ತಾರೆ. ೧೯೬೫ರಲ್ಲಿ ಕರ್ನಾಟಕ ಮಹಿಳಾ ಹಿಂದಿ ಸೇವಾ ಸಮಿತಿಯಿಂದ ಭಾಷಾ ಭೂಷಣವನ್ನು ಆನಂತರ ಹಿಂದೀ ಭಾಷಾ ಪ್ರವೀಣ ಪರೀಕ್ಷೆಯಲ್ಲಿ ಪಾಸಾದರು.

ಪ್ರತಿಕೂಲ ಪರಿಸ್ಥಿತಿಯಲ್ಲೂ ಸಾಧನೆಗೈಯ್ಯುತ್ತ ಹಂತಹಂತವಾಗಿ ಉನ್ನತ ಸ್ಥಾನಕ್ಕೆ ಏರಿದವರು ಇವರು. ಪ್ರಾಥಮಿಕ ಶಾಲಾ ಶಿಕ್ಷಕರಾಗಿ ತಮ್ಮ ವೃತ್ತಿ ಜೀವನವನ್ನು ಪ್ರಾರಂಭಿಸಿದ ಇವರು ನೌಕರಿ ಮಾಡುತ್ತಾ ಬಿ.ಎ. ಪದವಿಯನ್ನು ಪಡೆದು ನಂತರ ನೌಕರಿಯನ್ನು ತ್ಯಜಿಸಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಹಿಂದಿ ಸಾಹಿತ್ಯದಲ್ಲಿ ಪ್ರಥಮ ಶ್ರೇಣಿಯಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದರು. ಅದೇ ವಿಶ್ವವಿದ್ಯಾಲಯದಿಂದ ಬಾಹ್ಯ ಪರೀಕ್ಷೆಯ ಮೂಲಕ ೧೯೭೬ರಲ್ಲಿ ಕನ್ನಡ ಎಂ.ಎ. ಪದವಿಯನ್ನು ಪಡೆದರು. 'ಸಂತೋಂ ಔರ ಶಿವಶರಣೋಂ ಕೆಕಾವ್ಯಮೆ ಸಾಮಾಜಿಕ ಚೇತನಾ' ಎಂಬ ಸಂಶೋಧನಾ ಪ್ರಬಂಧವನ್ನು ಪ್ರೊ. ಶಿವರಾಜ ಹಳ್ಳಿಖೇಡರ ಮಾರ್ಗದರ್ಶನದಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಮರ್ಪಿಸಿ ಪಿಎಚ್‌ಡಿ ಪದವಿಯನ್ನು ಪಡೆದಿದ್ದಾರೆ.

**ವೃತ್ತಿಜೀವನ :**

೧೯೭೪ರಲ್ಲಿ ಶರಣಬಸವೇಶ್ವರ ಶಿಕ್ಷಣ ಸಂಸ್ಥೆಯ ಎಸ್.ಎಸ್. ಖೂಬಾ ಕಾಲೇಜು ಬಸವಕಲ್ಯಾಣದಲ್ಲಿ ಉಪನ್ಯಾಸಕರಾಗಿ ನೇಮಕಗೊಂಡು ೧೯೮೯ರವರೆಗೆ ಸೇವೆಸಲ್ಲಿಸಿದರು.

ಇವರು ವಿದ್ಯಾರ್ಥಿಗಳ ಅಚ್ಚು ಮೆಚ್ಚಿನ ಪ್ರಾಧ್ಯಾಪಕರಾಗಿದ್ದರು. ೧೯೮೯ರಿಂದ ೧೯೯೫ರವರೆಗೆ ಗುಲಬರ್ಗಾದ ಶರಣಬಸವೇಶ್ವರ ಕಲಾಮಹಾವಿದ್ಯಾಲಯದಲ್ಲಿ ಹಿಂದಿ ಪ್ರವಾಚಕರಾಗಿ ಕಾರ್ಯನಿರ್ವಹಿಸಿ ೧೯೯೫ರಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯದ ಹಿಂದಿ ವಿಭಾಗಕ್ಕೆ ಪ್ರವಾಚಕರಾಗಿ ನೇಮಕಗೊಂಡು, ಪ್ರಾಧ್ಯಾಪಕರಾಗಿ ನಿರ್ದೇಶಕರಾಗಿ ಸುಧೀರ್ಘ ಸೇವೆ ಸಲ್ಲಿಸಿ ೩೧ನೇ ಜುಲೈ ೨೦೦೭ರಂದು ನಿವೃತ್ತಿ ಹೊಂದಿದ್ದಾರೆ. ಅಧ್ಯಾಪಕ ವೃತ್ತಿಯೊಂದಿಗೆ ಸದಾ ಅಧ್ಯಯನ ಶೀಲರಾಗಿರುವ ಡಾ. ಅಂಬಲಗಿಯವರು ಹಲವಾರು ಸಂಶೋಧನಾ ವಿದ್ಯಾರ್ಥಿಗಳಿಗೆ ಮಾರ್ಗದರ್ಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರ ವೃತ್ತಿ ಹಾಗೂ ಸಾಧನೆಯ ಕುರಿತು ನಾಡಿನ ಪ್ರಸಿದ್ಧ ಸಾಹಿತ್ಯ ಚಿಂತಕರು ಇವರನ್ನು ಹಾಡಿ ಹೊಗಳಿದ್ದಾರೆ. ಈಗಿನ ವಿಶ್ರಾಂತಿ ಜೀವನದಲ್ಲೂ ಸಾಹಿತ್ಯಿಕ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

**ಸಾಹಿತ್ಯಿಕ ಹಿನ್ನಲೆ ಪರಿಸರ ಹಾಗೂ ಸಾಹಿತ್ಯಾಸಕ್ತಿ :**

ಸುಸಂಸ್ಕೃತ ಮನೆತನದಲ್ಲಿ ಜನಿಸಿರುವ ಕಾಶಿನಾಥರಿಗೆ ಬಾಲ್ಯದಿಂದಲೇ ಸಾಹಿತ್ಯಿಕ ಪರಿಸರ ದೊರಕಿತು. ಇವರನ್ನು ವಿದ್ಯಾಭ್ಯಾಸಕ್ಕೆ ತೊಡಗಿಸಿದ್ದ ಅಣ್ಣ ರಾಮಲಿಂಗಪ್ಪನು ಉಪನ್ಯಾಸಕನಾಗಿದ್ದು ಒಬ್ಬ ಸೃಜನಶೀಲ ಬರಹಗಾರರಾಗಿದ್ದರು. ಕಾಶೀನಾಥರು ಪ್ರೌಢಶಾಲೆಯಲ್ಲಿ ಓದುತ್ತಿದ್ದಾಗಲೆ ಅಣ್ಣ ಕೆಲವು ಅಭಂಗಗಳನ್ನು ಹಾಗೂ ಅಂದಿನ ಪೋಲಿಸ್ ಏಕ್ಸನ್ ಕುರಿತು ಬುಲಾಯಿ ಪದವನ್ನು ರಚಿಸಿದ್ದರು. ಮನೆಯಲ್ಲಿ ಇವರ ತಾಯಿ ಹಾಗೂ ಸುತ್ತಮುತ್ತಲಿನವರು ಜಾನಪದ ಹಾಡೂಗಳನ್ನೂ ಹಾಡುತ್ತಿದ್ದರು. ಊರಲ್ಲಿ ಭಜನೆ, ಜಾತ್ರೆ ಜಾನಪದ ಉತ್ಸವಗಳು ಅವ್ಯಾಹತವಾಗಿ ನಡೆಯುತ್ತಿದ್ದವು. ಅವುಗಳ ಪ್ರಭಾವ ಹಾಗೂ ಕನ್ನಡದ ಸಾಹಿತ್ಯಾಸಕ್ತಿ ಬೆಳೆದು ಆಧುನಿಕ ಕಾವ್ಯಗಳನ್ನು ಹೆಚ್ಚಾಗಿ ಓದುತ್ತಿದ್ದ ಅಂಬಲಗಿಯವರು ಕವಿಯಾಗಿ ರೂಪಗೊಂಡರು.

ಕಾಶಿನಾಥರು ಅನನ್ಯವಾದ ಪುಸ್ತಕ ಪ್ರೇಮಿ, ಇವರು ಹೊಸಗನ್ನಡ ಕಾವ್ಯ, ಕಾದಂಬರಿ ಹಾಗೂ ಕಥೆಗಳನ್ನು ಪ್ರಮುಖವಾಗಿ ಓದುತ್ತಿದ್ದರು. ಓದುವ ಚಟ ಬೆಳೆದಂತೆ ಬರವಣಿಗೆಯು ಇವರಿಗೆ ಪ್ರಿಯವಾಗುತ್ತ ನಡೆಯಿತು. ಓದಿನೊಂದಿಗೆ ಕವನ ರಚನೆ ಮಾಡುವುದನ್ನು ಇವರು ಹೈಸ್ಕೂಲಿನಲ್ಲಿ ವಿದ್ಯಾರ್ಥಿಯಾಗಿದ್ದಾಗಲೇ ಆರಂಭಿಸಿದರು. ೧೯೬೨ರಲ್ಲಿ ಇವರು ಮುಚಳಂಬಿ ಶಾಲೆಯಲ್ಲಿಯ ಹಸ್ತಲಿಖಿತ ಮಾಗ್ಜಿನ್ ಪತ್ರಿಕೆಯ ಸಂಪಾದಕರಾಗಿ ಕೆಲಸ ಮಾಡಿದ್ದರು. ಅದರಲ್ಲಿ ಒಂದು ಕವನ ಬರೆದರು. ೧೯೬೫ರಲ್ಲಿ ಕರ್ಮವೀರ ಹಾಗೂ ಪ್ರಪಂಚ ವಾರಪತ್ರಿಕೆಗಳಲ್ಲಿ ತಮ್ಮ ಸ್ವಂತ ಕವನಗಳನ್ನು ಪ್ರಕಟಿಸಿದರು. ೧೯೭೪ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಂಘದ ಮೂವತ್ತಾರು ಮುಖಗಳು ಮತ್ತು ಅರವತ್ತಮೂರು ಕವಿತೆಗಳು ಎಂಬ ಕಾವ್ಯ ಸಂಕಲನದಲ್ಲಿ ಇವರ ಎರಡು ಕವನಗಳು ಪ್ರಕಟವಾದವು. ಹಾಗೆಯೇ ನವ್ಯೋತ್ತರ

ಕಾವ್ಯದ ನಿಲವುಗಳ ದಾಖಲಿಸುವುದೇ ಇವುಗಳ ಉದ್ದೇಶವಾಗಿರುವ ಇದರಲ್ಲಿ ಉದಯವಾಣಿ, ಸಂಕ್ರಮಣ, ಲಂಕೇಶ ಮೊದಲಾದ ಕರ್ನಾಟಕದ ಪ್ರಮುಖ ಪತ್ರಿಕೆಗಳಲ್ಲಿ ಅವರ ಅನೇಕ ಕವನಗಳು ಪ್ರಕಟಗೊಂಡು ಸಹೃದಯರ ಕಣ್ಮನ ಸೆಳೆದಿವೆ. ಅವರ ಕಾವ್ಯರಚನೆಗೆ ಪ್ರೋತ್ಸಾಹ ನೀಡಿದ ಶ್ರೇಯಸ್ಸು ಗುಲಬರ್ಗಾ ಆಕಾಶವಾಣಿ ಕೇಂದ್ರಕ್ಕೆ ಸಲ್ಲುತ್ತದೆ. ವಚನಕಾರರ ವಚನಗಳ ವಿಶೇಷ, ಪ್ರಭಾವಕ್ಕೊಳಗಾದ ಅವರ ಕಾವ್ಯದಲ್ಲೂ ಹೊಸಹೊಸ ಪದಗಳ ಪ್ರಯೋಗ ಮಾಡಿರುವುದನ್ನು ಕಾಣುತ್ತೇವೆ. ಅವರ ಮಿನಿಗವನಗಳಲ್ಲಿ ಈ ಆಶಯ ಹಾಗೂ ಅಭಿವ್ಯಕ್ತಿಯ ರೀತಿ ಎದ್ದು ಕಾಣುತ್ತದೆ. ಬೀದರ ಕನ್ನಡ ಭಾಷಾ ಶೈಲಿಯನ್ನು ಬೆರೆಸಿ ನವೀನ ಅಭಿವ್ಯಕ್ತಿ ಕ್ರಮವನ್ನು ನಿರೂಪಿಸಿದ ಶ್ರೇಯಸ್ಸು ಅಂಬಲಗಿಯವರದು ಎಂದು ಹೇಳಬಹುದು.

ಯಾವಾಗಲೂ ಹೊಸತನಕ್ಕೆ ಹೊಂದಿಕೊಳ್ಳುವ ಜಾಯಮಾನದ ಅಂಬಲಗಿಯವರು ತಮ್ಮ ಅರವತ್ತನೆಯ ವಯಸ್ಸಿನಲ್ಲೂ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಲ್ಲೂ ಉತ್ಸಾಹಿತರಾಗಿದ್ದಾರೆ. ಗುಲಬರ್ಗಾದಲ್ಲಿ ಜರುಗುವ ಯಾವುದೇ ಸಾಹಿತ್ಯಿಕ ಕಾರ್ಯಕ್ರಮಗಳಲ್ಲಿ ಅವರು ತಪ್ಪದೇ ಹಾಜರಾಗುತ್ತಾರೆ. ಕಾವ್ಯವನ್ನು ತುಂಬಾ ಆಸಕ್ತಿಯಿಂದ ಆಲಿಸುತ್ತಾರೆ. ಅನ್ಯರ ಸಾಹಿತ್ಯದ ಬಗ್ಗೆಯೂ ತುಂಬಾ ಉತ್ಸಾಹದಿಂದ ಮಾತನಾಡುತ್ತಾರೆ. ಅದರಲ್ಲೂ ಹೈದ್ರಾಬಾದ ಕರ್ನಾಟಕದ ಕವಿಗಳ ಬಗ್ಗೆ ಮಾತನಾಡುವುದು ಅವರಿಗೆ ತುಂಬಾ ಆಸಕ್ತಿ ಎನ್ನಬಹುದು.

**ಸಾಹಿತ್ಯ ಸಾಧನೆ :**

ಸಮಕಾಲೀನ ವಿದ್ಯಮಾನಗಳಿಗೆ ವಿಶೇಷವಾಗಿ ಸ್ಪಂದಿಸುವ ಅಂಬಲಗಿಯವರದು ಪ್ರಯೋಗಶೀಲ ಮನಸ್ಸು, ಮೂವತ್ತೈದು ಕವನಗಳು ಇನ್ನಷ್ಟು ಕವನಗಳು, 'ಹುಲ್ಲು ಮೇಲಿನ ಹನಿಗಳು' ಹಾಗೂ 'ಕೌದಿ' ಎಂಬ ಕವನ ಸಂಕಲಗಳನ್ನು ಅವರು ಮೊದಲು ಪ್ರಕಟಿಸಿದ್ದಾರೆ. "ಈ ಕವನಗಳ ಮೂಲಕ ಇವರು ಬೀದರ ಜಿಲ್ಲೆಯ ಪ್ರಾದೇಶಿಕ ಕನ್ನಡವನ್ನು ಸತ್ವ ಪೂರ್ಣವಾಗಿ ಬಳಸಿಕೊಂಡಿದ್ದಾರೆ."[೩] ಸಂಕಲನದಿಂದ ಸಂಕಲನಕ್ಕೆ ಡಾ. ಕಾಶಿನಾಥ ಅಂಬಲಗಿಯವರು ಬೆಳೆದು ನಿಂತಿದ್ದನ್ನು ವಿಮರ್ಶಕರು ಗುರುತಿಸಿದ್ದಾರೆ.

೧೯೭೭ರಲ್ಲಿ ಪ್ರಕಟಗೊಂಡ ಅವರ "ಮೂವತ್ತೈದು ಕವನಗಳು" ಚೊಚ್ಚಲ ಕವನ ಸಂಕಲನದಲ್ಲಿ ಹೆಸರೇ ಸೂಚಿಸುವಂತೆ ೩೫ ಬಿಡಿ ಕವನಗಳ ಈ ಸಂಕಲನದ ಕುರಿತು ಒಳ್ಳೆಯ ಪ್ರಕ್ರಿಯೆಗಳು ಬಂದಿವೆ. ಸಂಕ್ರಮಣ ಪತ್ರಿಕೆಯು "ಇವರ ಕವನವೊಂದರಲ್ಲಿ

---

೩) ಎಂ. ಲಕ್ಷ್ಮಿನಾರಾಯಣ ಭಟ್ಟ – ಕೌದಿ ಸಂಕಲನದ ಅಭಿಪ್ರಾಯದಲ್ಲಿ

ಊಳಿಗ ಮಾನ್ಯತೆಯ ಸಿರಿತನದ ವಿರುದ್ಧ ಬೆಂಕಿ ಹತ್ತಿಕೊಳ್ಳುವ ಮುನ್ನದ ಸ್ಥಿತಿಯನ್ನು ತುಂಬಿಕೊಂಡ ಸಾಲುಗಳು ಕವಿ ಬಗ್ಗೆ ವಿಶ್ವಾಸ ಮೂಡಿಸುತ್ತದೆ”[೪] ಎಂದು ಹೇಳಿರುವುದು ಗಮನಾರ್ಹವಾಗುತ್ತದೆ. ಮೂವತ್ತೈದು ಕವನಗಳು ಪ್ರಾದೇಶಿಕ ಕನ್ನಡವನ್ನು ಸತ್ವಪೂರ್ಣವಾಗಿ ಬಳಸಿಕೊಳ್ಳಲು ಅಂಬಲಗೆಯವರು ಪ್ರಯತ್ನಿಸಿರುವ ಕೃತಿ ಎನ್ನುವ ಪ್ರಜಾವಾಣಿ ಪತ್ರಿಕೆಯು “ಅದರಲ್ಲಿ ಹರಿತವಾದ ವ್ಯಂಗ್ಯಕ್ಕೆ ಕೊರತೆಯಿಲ್ಲ”[೫] ಎಂದು ತಿಳಿಸಿದೆ. ಇದರಲ್ಲಿ ಎರಡು ಮುಖ್ಯ ಗುಣಗಳನ್ನು ಗುರುತಿಸುವ ಅರವಿಂದ ನಾಡಕರ್ಣಿಯವರು “ಈ ಗುಣಗಳಿಂದಲೇ ಕಾವ್ಯಕ್ಕೆ ಕಳೆಕಟ್ಟುವ ಹಾಗೂ ಬೆಳವಣಿಗೆಯ ಭರವಸೆ ನೀಡುವುದನ್ನು ತಿಳಿಸುವದಲ್ಲದೇ, ಸಮಾಂತರ ಸಾಲುಗಳ ಪ್ರೇರಣೆ ಮಾಡದೆ ಕವಿತೆ ಚುಟುಕಿನಲ್ಲೇ ರೂಪಗೊಳ್ಳುವ ರೀತಿ ಒಂದು. ತಮ್ಮ ರೋಷಗಳ ಭಾವಾವೇಶವನ್ನು ನಿಯಂತ್ರಿಸುವ ತಾಳ್ಮೆಯ ತನ್ಮಯತೆ ಇನ್ನೊಂದು. ಇದೊಂದು ಉತ್ತಮ ಕೃತಿ”[೬] ಎಂದಿದ್ದಾರೆ.

ಅವರ ಎರಡನೆಯ ಕವನಸಂಕಲನ ೧೯೮೬ರಲ್ಲಿ ಪ್ರಕಟಗೊಂಡ ಇನ್ನಷ್ಟು ಕವನಗಳು ಕೃತಿ ತಮ್ಮ ಹೆಂಡತಿಗೆ ಅರ್ಪಿಸಿರುವರು. ಇದರಲ್ಲಿ ಬದುಕನ್ನು ಅಪ್ಪಟವಾಗಿ ಪ್ರೀತಿಸುವ ಕವನಗಳಿವೆ. ‘ಹೆಣ ಎತ್ಲಿ’, ‘ಕುಂತಿ’, ‘ಬೆವರಿನವರು’, ‘ಅಡ್ಡ ಪಲ್ಲಕ್ಕಿ’, ‘ಮೆರವಣಿಗೆ’ಯಂತಹ ಇಲ್ಲಿನ ಕವನಗಳು ಖುಷಿ ಪಡುವ ಕವನಗಳಾಗಿದ್ದು, ಓದುಗರನ್ನು ನೇರವಾಗಿ ಮುಟ್ಟುತ್ತವೆ. ಬಂಡಾಯ ಕವಿ ಸರಜೂ ಕಾಟ್ಕರ್ ಅವರು “ಡಾ. ಕಾಶಿನಾಥ ಅಂಬಲಗೆ ಜನಪರ ಕವಿ, ಅವರ ಎಲ್ಲ ಕವಿತೆಗಳು ನೀವು ಈ ಅಂಶಗಳನ್ನು ಗುರುತಿಸಬಹುದು. ಈ ಕವಿತೆಗಳು ಜನರ ಮಧ್ಯದಲ್ಲಿಂದ ಅರಳಿದವುಗಳು”[೭] ಎನ್ನುತ್ತಾರೆ.

ಅವರ ಮೂರನೆಯ ಕವನ ಸಂಕಲನ “ಹುಲ್ಲು ಮೇಲಿನ ಹನಿಗಳು” ಸಂಕಲನದಲ್ಲಿ ನೂರು ಮಿನಿ ಕವನಗಳಿವೆ. ಇವುಗಳನ್ನು ಮುಕ್ತಕ ಹನಿಗವನ ಎಂದು ಕರೆಯಬಹುದು. ಆದರೆ ನಾನು ‘ಲಘುಕವನ’ ಎಂದು ಇವುಗಳನ್ನು ಕರೆಯುತ್ತಾನೆ[೮] ಎನ್ನುವ ಕವಿ ಪ್ರೀತಿ, ಪ್ರೇಮ, ಪ್ರಣಯವೇ ಇದಕ್ಕೆ ವಸ್ತುವಾಗಿರುವುದನ್ನು ಸ್ಪಷ್ಟಪಡಿಸುತ್ತಾರೆ.

---

೪. ಡಾ. ಕಾಶಿನಾಥ ಅಂಬಲಗೆ – ಚುಳುಕಾದಿರಯ್ಯ – ೨೦೦೬ ಅನಿಸಿಕೆಗಳು ಪುಟ. ಸಂ. ೧೬೫

೫. ಲೇಖಕರ ವಿಮರ್ಶೆ ಪ್ರಜಾವಾಣಿ ದಿನ ಪತ್ರಿಕೆ – ಇನ್ನಷ್ಟು ಕವನಗಳು

೬. ಡಾ. ಕಾಶಿನಾಥ ಅಂಬಲಗೆ ಚುಳುಕಾದಿರಯ್ಯ ೨೦೦೬ ಪುಟ ಸಂ. ೧೬೫

೭. ಡಾ. ಕಾಶಿನಾಥ ಅಂಬಲಗೆ ಚುಳುಕಾದಿರಯ್ಯ ೨೦೦೬ ಪುಟ ಸಂ. ೧೬೫

೮. ಡಾ. ಕಾಶಿನಾಥ ಅಂಬಲಗೆ – ಚುಳುಕಾದಿರಯ್ಯ – ೨೦೦೬ ಪುಟ ಸಂ. ೧೫೬

ವಿಮರ್ಶಕರಾದ ಡಿ.ಎಸ್. ನಾಗಭೂಷಣ ಅವರು "ಅಂಬುಲಗೆಯವರಲ್ಲಿ ಕವಿ ಇದ್ದಾನೆ ಎಂಬ ಸೂಚನೆ ನಮಗೆ ದೊರಕುವುದು ಅವರ ಸಣ್ಣ ಪದ್ಯಗಳಲ್ಲಿ"[೯] ಎನ್ನುತ್ತಾರೆ. ಯಾಕೆಂದರೆ ಇವರ "ಚಿಕ್ಕ ಕವನಗಳು ಚೊಕ್ಕವೆನಿಸಲು ಕಾರಣ ಅಲ್ಲಿರುವ ಭಾವ ಭಾಷೆಗಳ ಅನುರೂಪ ಹೊಂದಾಣಿಕೆ"[೧೦] ಎಂಬುದು ಚೆನ್ನವೀರ ಕಣವಿ ಅವರ ಅಭಿಪ್ರಾಯ.

ಅಂಬಲಗೆಯವರ ನಾಲ್ಕನೆಯ ಕವನ ಸಂಕಲನ ಕೌದಿ (೧೯೯೪) ಕವಿಗಳಿಗೆ ಒಳ್ಳೆಯ ಹೆಸರನ್ನು ತಂದು ಕೊಟ್ಟಿರುವ ಕೃತಿ ಇದೊಂದು ಅದ್ಭುತವಾದ ರಚನೆ. ಈ ಕವನದೊಳಗಡೆ ಕವಿಯು ಕಟ್ಟಿಕೊಂಡುವ ಸೈದ್ಧಾಂತಿಕತೆ ಮತ್ತು ಅಸೈದ್ಧಾಂತಿಕ ಪ್ರಕಟಣೆಗೆ ಬಳಸಿಕೊಂಡ ವಿವರಗಳು ಬಹಳ ಶ್ರೇಷ್ಠ ಮಟ್ಟದವು. "ಕವಿಗೆ ಕಾವ್ಯ ಪ್ರಕಾರದ ಮೇಲೆ ಒಳ್ಳೆಯ ಹಿಡಿತವಿರುವುದನ್ನು ನಿರೂಪಿಸುವ ಕೃತಿಯಿದು ಎನ್ನುತ್ತಾರೆ ವಿಮರ್ಶಕರು."[೧೧] ಕೌದಿ ಸಂಕಲನದಲ್ಲಿ ಸೃಷ್ಟಿಸಿರುವ ಸಾಮಾಜಿಕ ನಿಲುವುಗಳು ಒಡೆದು ಕಾಣಿತ್ತಿದ್ದರೂ ಅವು ಒಳ್ಳೆಯ ಕವನಗಳು ಎನಿಸುತ್ತವೆ. ಬಂಡಾಯ ಕಾವ್ಯದ ಈಗಿನ ಮಜಲಿನಲ್ಲಿ ಅನೇಕ ಕವಿಗಳಲ್ಲಿ ಕಾಣುತ್ತಿರುವ ಗುಣಾತ್ಮಕ ಅಂಶವು ಇಲ್ಲಿಯೂ ಇರುವುದನ್ನು ನಾವು ಗುರುತಿಸಬಹುದಾಗಿದೆ.

೧೯೯೩ರ "ಕೌದಿ" ನಂತರ ಮೂರು ಅನುವಾದ ಕವನ ಸಂಕಲಗಳಾದ (೧) ಸಮಕಾಲೀನ ಪಂಜಾಬೀ ಕವಿತೆಗಳು (೨) ಕೋಗಿಲೆ ಅಳುತಿದೆ ಹಾಗೂ (೩) ಓದಿ ಅಳುವುದು ಪ್ರಕಟವಾದವು. ಈ ಅನುವಾದಗಳ ಮೂಲಕ ಕನ್ನಡಕ್ಕೆ ಹೊಸಸೃಜನ ಸಾಧ್ಯತೆಗಳನ್ನು ತಂದು ನಿಲ್ಲಿಸುವ ಕವಿಯ ಶ್ರಮ ಇಲ್ಲಿ ಸಾರ್ಥಕವಾಗಿದೆ.

ನವರಾಜ ಪ್ರಕಾಶನ ದೆಹಲಿಯಿಂದ ಪ್ರಕಟಗೊಂಡಿರುವ 'ಅಧೂರೆ ಶಬ್ಧ' ಕವನ ಸಂಕಲನಕ್ಕೆ ಕೇಂದ್ರ ಸರಕಾರದ ಎಚ್‌ಆರ್‌ಡಿ ಕೇಂದ್ರಿಯ ಹಿಂದೀ ನಿರ್ದೇಶನಾಲಯದ ೫೦ ಸಾವಿರದ ಪ್ರಶಸ್ತಿ ಬೆಂಗಳೂರು ವಿಶ್ವವಿದ್ಯಾಲಯದ ಮಹಾತ್ಮಗಾಂಧಿ ಪುರಸ್ಕಾರ, ಗುಲಬರ್ಗಾ ವಿಶ್ವವಿದ್ಯಾಲಯದ ರಾಜ್ಯೋತ್ಸವ ಪುರಸ್ಕಾರಗಳನ್ನು ಪಡೆದಿದೆ. ಇದೊಂದು ಪ್ರಸಿದ್ಧ ಕೃತಿ. ೨೦೦೬ರಲ್ಲಿ ತಮ್ಮ ನಾಲ್ಕು ಕವನ ಸಂಕಲನಗಳನ್ನು ಸೇರಿಸಿ ಚುಳುಕಾದಿರಯ್ಯ ಎಂಬ ಕಾವ್ಯ ಗುಚ್ಚವೊಂದನ್ನು ಪ್ರಕಟಿಸಿದ್ದಾರೆ. "ಕಾವ್ಯವನ್ನು ಪ್ರಜ್ಞಾ ಪೂರ್ಣವಾದ

---

೯. ಡಾ. ಕಾಶಿನಾಥ ಅಂಬಲಗೆ – ಚುಳುಕಾದಿರಯ್ಯ – ೨೦೦೬ ಪುಟ ಸಂ. ೧೬೬

೧೦. ಡಾ. ಕಾಶಿನಾಥ ಅಂಬಲಗೆ – ಚುಳುಕಾದಿರಯ್ಯ – ೨೦೦೬ ಪುಟ ಸಂ. ೧೬೬

೧೧. ಡಾ. ಪುರುಷೋತ್ತಮ ಬಿಳಿಮನೆ – ಚುಳುಕಾದಿರಯ್ಯ – ೨೦೦೬

ಹೆರಿಗೆ''[೧೨] ಎಂದು ನಂಬುವ ಕವಿಯು ದೂರದ ಬೀದರನ ಹಳ್ಳಿಯಲ್ಲಿ ಹುಟ್ಟಿ ಕಾವ್ಯ ಬರೆಯಲು ತೊಡಗಿದವರು. ಅದರೊಂದಿಗೆ ಕಾವ್ಯದ ಟ್ರೇಟ್‌ಮೆಂಟ ಹೇಗಿರಬೇಕೆಂಬುದು ಗೊತ್ತಿಲ್ಲ ಎನ್ನುತ್ತಲೆ ಅದರ ತಿರುಳನ್ನು ಅರಿತಿರುವ ಕವಿ ಅವರು ಇದರ ಮುನ್ನುಡಿ ಹಾಗೂ ಇದರಲ್ಲಿರುವ ಅನಿಸಿಕೆಗಳು ಓದುಗರಿಗೆ ತುಂಬಾ ಉಪಯುಕ್ತವೆನಿಸುತ್ತವೆ. ಅವರ ಐದನೆಯ ಕವನ ಸಂಕಲನ ಗಝುಲ್ (ಮಿನಿಕವಿತೆ) ಇತ್ತೀಚೆಗೆ ಪ್ರಕಟಗೊಂಡ ಅವರ ಗಝುಲ್ (ಮಿನಿಕವಿತೆಗಳು) ಸಾಹಿತ್ಯಾಸಕ್ತರ ಗಮನ ಸೆಳೆಯುತ್ತದೆ. ಕನ್ನಡದಲ್ಲಿ ಈ ಪ್ರಕಾರದ ಸಾಹಿತ್ಯ ಅಷ್ಟಾಗಿ ಬೆಳೆದು ಬಂದಿಲ್ಲ. ಆ ದೃಷ್ಟಿಯಿಂದ ಅವರ ಗಜಲಗಳು ಕಿಚಿಚಿತ್ತಾದರೂ ಆ ಕೊರತೆಯನ್ನು ತುಂಬಿವೆ ಎನಿಸುತ್ತದೆ.

ಅರವತ್ತರ ವಸಂತಗಳನ್ನು ದಾಟಿರುವ ಡಾ. ಅಂಬಲಗಿಯವರು ಗುಲಬರ್ಗಾ ವಿಶ್ವವಿದ್ಯಾಲಯದ ಹಿಂದೀ ಪ್ರಾಧ್ಯಾಪಕರಾಗಿ ಹಾಗೂ ಆ ವಿಭಾಗದ ಅಧ್ಯಕ್ಷರಾಗಿ ಸೇವೆ ಸಲ್ಲಿಸುವದರೊಂದಿಗೆ ಸಂಶೋಧನಾ ಅನುಭವವುಳ್ಳವರು. ಈಗಾಗಲೇ ೩ ಪಿಎಚ್.ಡಿ ಹಾಗೂ ೭ ಎಮ.ಫಿಲ್ ಪದವಿಯನ್ನು ಅವರ ಮಾರ್ಗದರ್ಶನದಲ್ಲಿ ಪಡೆದಿದ್ದಾರೆ. ಅವರು ಸಂಪಾದಿಸಿ ಪ್ರಕಟಿಸಿರುವ ಕನ್ನಡ ಹಾಗೂ ಹಿಂದೀ ಸಾಹಿತ್ಯ ಕೃತಿಗಳು ಈ ರೀತಿ ಇವೆ.

**ಕನ್ನಡ**

೧) ಶಿವಶರಣ ಪಾಟೀಲ ಜವಳಿ ಕವಿ ವ್ಯಕ್ತಿ ಕೃತಿ (ಸಂ)
೨) ದಾಸೋಹ (ರಂಗ ಶಿಬಿರ ಸ್ಮರಣ ಸಂಚಿಕೆ) (ಸಂ)
೩) ಮಹಿಳಾ ವಚನ (ಸಂ)
೪) ಶಬ್ದದ ಬೆಡಗ (ಸಂ)

**ಹಿಂದೀ**

೧) ಆಧುನಿಕ ಹಿಂದೀ ಕಾವ್ಯ ಪ್ರಕಾಶ (ಬಿಕಾಂ ಪಠ್ಯ)
೨) ಸಂತೋಂ ಔರ ಶಿವಶರಣೊಂಕೆ ಕಾವ್ಯಮೆ ಸಾಮಾಜಿಕ ಚೇತನಾ (ಮಹಾಪ್ರಬಂಧ)
೩) ಶರಣ ಔರ ಸಂತಃ ಸಾಮಾಜಿಕ ಚಿಂತನ

---

೧೨. ಡಾ. ಕಾಶಿನಾಥ ಅಂಬಲಗೆ – ಚುಳುಕಾದಿರಯ್ಯ – ೨೦೦೬ ಕೆಲವು ನುಡಿ ಪುಟ ಸಂ. vii

೪) ಶರಣ ಔರ ಸಂತಃ ಸಾಮಾಜಿಕ ಚಿಂತನ

೫) ಬಸವೇಶ್ವರ ಕಾವ್ಯ ಶಕ್ತಿ ಔರ ಸಾಮಾಜಿಕ ಶಕ್ತಿ

೬) ಬಸವಾದಿ ಶರಣೊಂಕೆ ಸಾಹಿತ್ಯಕೆ ಸಾಮಾಜಿಕ ಚೇತನಾ - ಎಂಬಂತಹ ಮಹತ್ವದ ಕೃತಿಗಳನ್ನು ರಚಿಸಿದ್ದಾರೆ.

ಕನ್ನಡದಿಂದ ಹಿಂದಿ ಬಾಷೆಗೆ ಅವರು ಅನುವಾದಿಸಿದ ಕೃತಿಗಳು ೧) ಬಸವ ಚೇತನಾ (೨) ಶಿವಯೋಗಿ ಸಿದ್ಧರಾಮೇಶ್ವರ (೩) ಸಿದ್ಧರಾಮೇಶ್ವರಕೆ ಚುನೆ ಹುವೆ ೧೦೮ ವಚನ (೪) ಲಂಕೇಶರ ನಾಟಕ ಕ್ರಾಂತಿ ಬಂತು ಕ್ರಾಂತಿ (೫) ಸಾರಾ ಅಬೂಬಕರ ಅವರ - ಚಂದಗಿರಿ ನದಿಯ ತೀರದಲ್ಲಿ (೬) ಜಿ.ಎಸ್.ಎಸ್. ಕಣವಿ, ಚಂಪಾ, ಶಾಂತರಸ, ಅಲ್ಲಮ ಪ್ರಭು ಬೆಟ್ಟದೂರು, ಶೈಲಜಾ ಉಡಚಣ ಹಾಗೂ ಅಂಬಲಗಿ ಕವಿತೆಗಳು (ಪಂಜಾಬಿ ಪತ್ರಿಕೆಗಾಗಿ) (೭) ವಚನಗಳು (೮) ಹಲವುನಾಟಕಗಳು ರೂಪಕಗಳು (೯) ೩೦ ಕನ್ನಡ ಕವಿತೆ - ಯುಗ ಸ್ಪಂದನ ದೆಹಲಿ ಹಿಂದೀ ಪತ್ರಿಕೆಗಾಗಿ ರಚಿಸಿದ್ದಾರೆ.

ಹಿಂದಿಯಿಂದ ಕನ್ನಡಕ್ಕೆ

೧) ಡಾ. ರಾಮಧಾರಿ ಸಿಂಹ ಹಾಗೂ ದಿವಾಕರ್ ಕೇಶವ ಬಲರಾಮರ ಕಥೆಗಳು

೨) ಪಂಜಾಬಿ, ಗುಜರಾತಿ, ಬಂಗಾಲಿ ಕವಿತೆಗಳು (ಹಿಂದೀ ಮೂಲ) ಮುಂತಾದವುಗಳು

ಮುಂತಾದವುಗಳು ಡಾ. ಕಾಶಿನಾಥ ಅಂಬಲಗೆಯವರು ಅನುವಾದಿಸಿರುವ ಈ ಎಲ್ಲ ಕೃತಿಗಳು "ಕನ್ನಡದ ಸೃಜನಶೀಲತೆಯ ಸಂದರ್ಭಕ್ಕೆ ಹೊಸ ಸಂವೇದನೆ ಹಾಗೂ ವಿಚಾರಗಳನ್ನು ಪೂರೈಸುತ್ತವೆ."[೧೩] ಒಟ್ಟಿನಲ್ಲಿ ಅವರ ಸಾಹಿತ್ಯಿಕ ಜೀವನದ ವ್ಯಾಪ್ತಿ ಹಿರಿದಾಗಿರುವುದನ್ನು ಅರಿಯಬಹುದು.

**ಕೌಟುಂಬಿಕ ಜೀವನ** : ಕಲ್ಯಾಣ ನಾಡಿನ ಕೃಷಿಕ ಕುಟುಂಬವೊಂದರಲ್ಲಿ ಜನಿಸಿದ ಕಾಶೀನಾಥರು ಜನಪದ ಜೀವಿಗಳು. ಅವರದು ಅನ್ಯೋನ್ಯವಾದ ಕುಟುಂಬ. ಬಾಲ್ಯದಿಂದಲೂ ತಂದೆ ತಾಯಿಯೊಂದಿಗೆ ಬಡತನದಲ್ಲಿ ಬೆಳೆದು ಬಂದಿರುವ ಇವರು ಸರಳ ಹೃದಯಿಗಳು. ಪ್ರತಿಕೂಲ ಪರಿಸ್ಥಿತಿಯಲ್ಲೂ ಸಾಧನೆಗೈಯ್ಯುತ್ತ ಹಂತ ಹಂತವಾಗಿ ಉನ್ನತ ಶಿಕ್ಷಣ ಪಡೆದು ಮೇಲೇರಿದವರು. ತಮ್ಮ ವೃತ್ತಿ ಜೀವನದೊಂದಿಗೆ ದಾಂಪತ್ಯ ಜೀವನಕ್ಕೆ ಕಾಲಿರಿಸಿರುವ ಅವರು ದಾಂಪತ್ಯದಲ್ಲಿ ಸೌಖ್ಯ ಕಂಡಿದ್ದಾರೆ. ಪ್ರೀತಿಯಿಂದ ನೆಮ್ಮದಿಯ ಬದುಕು ಸಾಗಿಸುತ್ತ ಈಗ ೬೦ ವಸಂತಗಳನ್ನು ದಾಟಿದ್ದಾರೆ. ಗಂಡನ

---

೧೩. ರಾಹು – ಓದಿ ಅಳುವುದು ಕೃತಿಯ ಬೆನ್ನುಡಿಯಲ್ಲಿ ೨೦೦೨

ಸಾಧನೆಯ ಹಿಂದೆ ಹೆಂಡತಿಯ ಶ್ರಮ ಹಾಗೂ ತ್ಯಾಗದ ಬದುಕು ಇದ್ದೇ ಇರುತ್ತದೆ ಎಂಬುದನ್ನು ನಾವು ಡಾ. ಅಂಬಲಗೆಯವರ ದಾಂಪತ್ಯದ ಬದುಕಿನಲ್ಲೂ ಕಾಣುತ್ತೇವೆ. ಕಾಶೀನಾಥರ ಎಲ್ಲ ಪ್ರಕಟಣೆಗಳಿಗೆ ಪ್ರಕಾಶಕಿಯಾಗಿರುವ ಲೀಲಾವತಿಯವರು ಪ್ರಕಾಶನದ ಪರವಾಗಿ ಕೆಲವು ಸಾಹಿತ್ಯಿಕ ಟಿಪ್ಪಣಿಗಳನ್ನು ಬರೆದು ಪ್ರೀತಿ ತೋರಿಸುವಷ್ಟು ಉದಾರವಾದಿಗಳು. ಗಂಡನ ಎಲ್ಲಾ ಕೆಲಸಗಳಲ್ಲಿ ಸಹಕಾರಿಯಾಗಿರುವ ಅವರು ಒಂದು ಸಂಕಲನವನ್ನೂ ತಮಗೂ ಅರ್ಪಣೆ ಮಾಡಿಸಿಕೊಂಡವರು "ಕವಿಯಾದ ಗಂಡನಿಂದ ಕವನವನ್ನು ಬರೆಸಿಕೊಂಡ ಹೆಂಡತಿ ಲೀಲಾ ಆಗಿದ್ದಾರೆ."[೧೪] ಮುತ್ತಿನಂತಹ ಮೂವರು ಮಕ್ಕಳಿರುವ ಸುಖ ಕುಟುಂಬ ಇವರದು. ಇಬ್ಬರು ಪುತ್ರಿ ಹಾಗೂ ಒಬ್ಬ ಪುತ್ರರು ಉನ್ನತ ಶಿಕ್ಷಣ ಹೊಂದಿದ್ದಾರೆ.

ಮನೆಯ ಯಜಮಾನಿಕೆಯ ಜೊತೆಗೆ ಗಂಡನ ಸಾಹಿತ್ಯಿಕ ಜೀವನಕ್ಕೂ ಸಂಗಾತಿಯಾಗಿರುವ ಲೀಲಾವತಿಯವರು ಬದುಕನ್ನು ಇಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಆರ್ಥಿಕ ನೋಟವೊಂದೇ ಮುಖ್ಯವಾಗಿರುವಾಗ ಪ್ರಾಧ್ಯಾಪಕಿಯಾಗಿರುವ ಲೀಲಾವತಿಯವರು ಸಾಹಿತ್ಯಿಕ ನೋಟದಲ್ಲಿ ಭಾಗಿಯಾಗಿರುವ ವಿರಳ ದಂಪತಿಗಳಲ್ಲಿ ಇವರು ಒಬ್ಬರಾಗಿದ್ದಾರೆ. ತಮ್ಮ ಸತಿಯು ಸದಾ ತಮಗೆ ಮಾರ್ಗದರ್ಶಿಯಾಗಿ ಸುಖೀ ದಾಂಪತ್ಯಕ್ಕೆ ಸಹಕಾರಿಯಾಗಿರುವುದನ್ನು ಸಾಹಿತ್ಯಕ್ಕೆ ಪ್ರೇರಕರಾಗಿ ನಿಂತಿರುವುದನ್ನು ಡಾ. ಕಾಶಿನಾಥ ಅಂಬಲಗಿಯವರು ಸ್ಮರಿಸುತ್ತಾರೆ.

ಡಾ. ಅಂಬಲಗಿಯವರು ಸ್ನೇಹ ಜೀವಿಗಳು. ಮೋಸ, ವಂಚನೆ, ಅಪ್ರಾಣಿಕತೆಯನ್ನು ಸಹಿಸುವವರಲ್ಲ ನೇರ ಮಾತಿನ ಗುಣವಿರುವ ಇವರು ಕುಟುಂಬದ ಸದಸ್ಯರೆಲ್ಲರಿಗೂ ಪ್ರೀಯರಾಗಿರುವರು. ಮಕ್ಕಳಿಗೆ ಕೇವಲ ತಂದೆಯಾಗದೇ ಗೆಳೆಯರೂ ಆಗಿದ್ದಾರೆ. ಪುತ್ರಪುತ್ರಿಯರೊಂದಿಗೆ ಸೌಖ್ಯವಾಗಿರುವ ಇವರು ತಾಯಿ, ಅಣ್ಣ, ಅತ್ತಿಗೆಯರನ್ನು ತುಂಬಾ ಗೌರವದಿಂದ ಕಾಣುತ್ತಾರೆ.

ಪ್ರಗತಿಪರ ವಿಚಾರಧಾರೆಯುಳ್ಳ ಇವರು ಜನಪ್ರೀಯತೆಯನ್ನು ಗಳಿಸಿದ್ದಾರೆ. ಗೆಳೆಯರೊಂದಿಗೆ, ಸಮಾನ ವಿಚಾರಧಾರೆಯೊಂದಿಗೆ ತುಂಬಾ ಆತ್ಮೀಯತೆಯಿಂದ ಬೆರೆತು ಸಾಗಿದ್ದಾರೆ. ಎಲ್ಲರನ್ನೂ ಸಮಾನ ದೃಷ್ಠಿಯಿಂದ ಕಾಣುತ್ತಾ ಬಾಳುತ್ತಿರುವುದನ್ನು ಅವರ ಗೆಳೆಯರ ಬಳಗ ಹೊಗಳುತ್ತದೆ. ಗುಲಬರ್ಗಾದಲ್ಲಿ ವಾಸವಾಗಿದ್ದುಕೊಂಡು ಹಲವು ಸಾಮಾಜಿಕ, ಸಾಹಿತ್ಯಿಕ ಸಂಘಟನೆಗಳ ಸದಸ್ಯರಾಗಿದ್ದು ತುಂಬುಜೀವನದ ದಾಂಪತ್ಯ ಸುಖವನ್ನು ಅನುಭವಿಸುತ್ತಿದ್ದಾರೆ. ಒಟ್ಟಿನಲ್ಲಿ ಸಾಹಿತಿಯಾಗಿ ಚಿಂತಕರಾಗಿ ಆದರ್ಶ ಬದುಕಿನ ಪುರಷರಾಗಿರುವ ಡಾ. ಅಂಬಲಗಿಯವರದು ಶ್ರೇಷ್ಠ ಸಾಂಸ್ಕೃತಿಕ ಜೀವನವೆಂಬುದನ್ನು ಅರಿಯಬಹುದು.

---

೧೪. ನೋಡಿ ಕವನ ಅರ್ಪಣೆ – ಇನ್ನಷ್ಟು ಕವನಗಳು – ೧೯೮೬

**ರಂಗಭೂಮಿಯ ಕೊಡುಗೆ :**

ಡಾ. ಕಾಶಿನಾಥ ಅಂಬಲಗಿಯವರು ಕ್ರಿಯಾಶೀಲ ವ್ಯಕ್ತಿ. ನಿರಂತರವಾಗಿ ತಮ್ಮನ್ನು ಸಾಹಿತ್ಯಿಕ ಹಾಗೂ ಸಂಘಟನಾತ್ಮಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಬಸವಕಲ್ಯಾಣದಲ್ಲಿದ್ದಾಗಲೇ ೧೯೭೪ರಲ್ಲಿ ಅವರೊಂದು ಅಭಿವ್ಯಕ್ತಿ ಸಾಹಿತ್ಯ ಮತ್ತು ಸಾಂಸ್ಕೃತಿಕ ವೇದಿಕೆಯನ್ನು ಆರಂಭಿಸಿದ್ದರು. ಆ ಸಂದರ್ಭದಲ್ಲಿ ಯುವ ಪ್ರತಿಭಾವಂತರಿಗೆ ವೇದಿಕೆಯು ಮೂಲಕ ಪ್ರೋತ್ಸಾಹ ನೀಡಿದರು.

ನಂತರದಲ್ಲಿ ಇವರು ಲಂಕೇಶರ ಕ್ರಾಂತಿ ಬಂತು ಕ್ರಾಂತಿ ಎಂಬ ನಾಟಕವನ್ನು ನಿರ್ದೇಶಿಸಿ ಬಸವಕಲ್ಯಾಣದಲ್ಲಿ ವೈಚಾರಿಕ ನಾಟಕಗಳ ಹೊಸ ಅಲೆ ಬೀಸುವಂತೆ ಮಾಡಿದರು. ಇನ್ನೊಂದು ಕುರಿ ಎನ್ನುವ ನಾಟಕದಲ್ಲಿ ಅಭಿನಯಿಸಿ, ಪ್ರದರ್ಶಿಸಿ ಯಶಸ್ವಿರಂಗ ಚಟುವಟಿಕೆಗಳ ಸಂಚಾಲಕರಾಗಿ ಪ್ರಸಿದ್ಧಿ ಹೊಂದಿದ್ದರು. ಲಂಕೇಶರ ಕ್ರಾಂತಿ ಬಂತು ಕ್ರಾಂತಿ ಹಿಂದಿ ಭಾಷೆಗೂ ಅನುವಾದಿಸಿದರು. ಇದು ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ ಪ್ರಕಟವಾಗುವ ಯೋಜನಯಡಿಯಲ್ಲಿ ಸಮಕಾಲೀನ ಭಾರತೀಯ ಸಾಹಿತ್ಯದಲ್ಲಿ ಪ್ರಕಟವಾಯಿತು. ಅಂಬಲಗೆಯವರು ೧೯೮೩ ಹೆಗ್ಗೋಡಿನ ನೀನಾಸಂ ನಾಟ್ಯ ಸಂಘದವರಿಂದ ಒಂದು ತಿಂಗಳು ರಂಗ ತರಬೇತಿ ಶಿಬಿರ ಏರ್ಪಡಿಸಿ ಅಭಿನಯ, ಮೇಕಪ್, ನಿರ್ದೇಶನ ಇತ್ಯಾದಿ ತರಬ್ಬೆತಿಯನ್ನು ಪಡೆಯಲು ಸಹಕರಿಸಿದರು. ಅಷ್ಟೇ ಅಲ್ಲದೆ ರಾಷ್ಟ್ರೀಯ ನಾಟಕ ಶಾಲೆಯ ಪದವೀಧರರನ್ನು ಕರೆಯಿಸಿ ತರಬೇತಿಯನ್ನು ಏರ್ಪಡಿಸಿದರು.

ತರಬೇತಿ ನಂತರ ಜಡಭಾರತದ ಕದಡಿದ ನೀರು ಹಾಗೂ ಬಿ.ವಿ. ಕಾರಂತರ ಪಚಿಜರ ಶಾಲೆಯ ಎಂಬ ಎರಡು ನಾಟಕಗಳನ್ನು ಪ್ರದರ್ಶಿಸಿದರು. ೪೦ಜನ ಮಕ್ಕಳನ್ನು ಸೇರಿಸಿ ಶಿಬಿರದಲ್ಲಿ ಜಯತೀರ್ಥ ಜೋಶಿ ಅವರ ನಿರ್ದೇಶನದಲ್ಲಿ ನಾಟಕ ಪ್ರದರ್ಶನಕ್ಕೆ ಕಾರಣೀಭೂತರಾದರು.

ಗಿರಡ್ಡಿ ಗೋವಂದರಾಜ, ಆರ್.ಕೆ. ಹುಡುಗಿ, ಎಂ.ಜಿ. ಬಿರಾದಾರ ಮುಂತಾದವರ ಜೊತೆಗೂಡಿ ನಾಟಕ ಮತ್ತು ರಂಗಭೂಮಿ ಕುರಿತು ಭಾಷಣ ಮತ್ತು ಸಂವಾದ ಏರ್ಪಡಿಸಿದ್ದರು. ಈ ಮೂಲಕ ಬಸವಕಲ್ಯಾಣದಲ್ಲಿ ಸಾಹಿತ್ಯ ಮತ್ತು ಸಾಂಸ್ಕೃತಿಕ ವೈಭವ ಮೂಡಿಸಲು ಪ್ರಯತ್ನಿಸಿದರು.

**ಸಾಮಾಜಿಕ ಹಾಗೂ ಸಾಹಿತ್ಯಿಕ ಕಾರ್ಯಕ್ಷೇತ್ರ :**

ಈಗ ಗುಲಬರ್ಗಾದ ಸಮುದಾಯ ಘಟಕದ ಕಾರ್ಯಕಾರಿ ಸದಸ್ಯರಾಗಿದ್ದುಕೊಂಡು ಜನಮನದಲ್ಲಿ ಪ್ರಗತಿಪರ ವಿಚಾರಧಾರೆಗಳನ್ನು ಬಿತ್ತಲು ಪ್ರಯತ್ನಿಸುತ್ತಿದ್ದಾರೆ. ಈ ಸಂಘಟನೆಯ ಮೂಲಕ ೧೫ ಕವಿಗಳ ಅನಾವರಣ ಕೃತಿಯನ್ನು ಹೊರತರುವಲ್ಲಿ ಇತರರೊಂದಿಗೆ ಶ್ರಮಿಸಿರುವುದನ್ನು ಕಾಣಬಹುದು.

ಹಲವಾರು ಸಾಹಿತ್ಯ ಸಮ್ಮೇಳನ, ಗೋಷ್ಠಿ, ಶಿಬಿರಗಳಲ್ಲಿ ಭಾಗಿಯಾಗಿರುವ ಇವರು ಇಲ್ಲಿ ತುಂಬಾ ಉಪಯುಕ್ತವಾದ ಪ್ರಬಂಧ ಮಂಡನೆ, ಸಂವಾದಗೋಷ್ಠಿ ನಡೆಸಿಕೊಟ್ಟಿರುವರು. ಹುಬ್ಬಳ್ಳಿ, ಹಾಸನ, ಬೀದರದಲ್ಲಿ ಜರುಗಿದ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಬಿಜಾಪುರ, ದಾವಣಗೆರೆ, ಗಾಣಗಾಪುರ, ಧಾರವಾಡಗಳಲ್ಲಿ ಜರುಗಿದ ರಾಜ್ಯಮಟ್ಟದ ಬಂಡಾಯ ಸಾಹಿತ್ಯ ಸಮ್ಮೇಳನದಲ್ಲಿ ವಾಸ್ಕೊ–ಗೋವಾದಲ್ಲಿ ಜರುಗಿರುವ ಕೇಂದ್ರ ಹಿಂದಿ ನಿರ್ದೇಶನಾಲಯದ ನವ ಹಿಂದೀ ಲೇಖಕರ ಶಿಬಿರದಲ್ಲಿ ಕನ್ನಡ ಸಾಹಿತ್ಯ ಅಕಾಡೆಮಿ ಬೆಂಗಳೂರಿನ ಅನುವಾದ ಕಮ್ಮಟದಲ್ಲಿ ಗೋವಾ ವಿಶ್ವವಿದ್ಯಾಲಯದ ರಾಷ್ಟ್ರೀಯ ವಿಚಾರಗೋಷ್ಠಿಯಲ್ಲಿ ನವದೆಹಲಿಯ ಕುವೆಂಪು ಹೆರಿಟೇಜ್ ರಾಷ್ಟ್ರೀಯ ಗೋಷ್ಠಿಗಳಲ್ಲಿ ಇವರು ಭಾಗವಹಿಸಿ ಗಮನ ಸೆಳೆದಿದ್ದಾರೆ.

ರಾಷ್ಟ್ರದ ಪ್ರಮುಖ ಸಂಘಸಂಸ್ಥೆಗಳ ಸದಸ್ಯರು ಹಾಗೂ ಪ್ರಮುಖ ಸಾಹಿತ್ಯ ಪತ್ರಿಕೆ ಪುಸ್ತಕಗಳ ಸಂಪಾದಕರಾಗಿಯೂ ಸೇವೆಸಲ್ಲಿಸಿರುವುದು ಡಾ. ಅಂಬಲಗಿಯವರ ಹೆಗ್ಗಳಿಕೆ ಎನ್ನಬಹುದು. ೧) ೧೯೯೫ರಿಂದ ೯೮ರವರೆಗೆ ಇವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿದ್ದರು (೨) ಕಲಬುರ್ಗಿ ಸಮುದಾಯ ಘಟಕದ ಅಧ್ಯಕ್ಷ ಉಪಾಧ್ಯಕ್ಷರಾಗಿ ಸೇವೆಸಲ್ಲಿಸಿ ಈಗ ಕಾರ್ಯಕಾರಿ ಸಮಿತಿಯ ಸದಸ್ಯರಾಗಿರುವರು (೩) ಕಲಬುರ್ಗಿ ಜಿಲ್ಲಾ ಜ್ಞಾನ ವಿಜ್ಞಾನ ಜಾತಾ ಸಮಿತಿಯ ಉಪಾಧ್ಯಕ್ಷರಾಗಿದ್ದಾರೆ (೪) ದೆಹಲಿಯ ಹಿಂದೀ ಸಾಹಿತ್ಯ ಪತ್ರಿಕೆಯುಗ ಸ್ಪಂದನದ ಅತಿಥಿ ಸಂಪಾದಕರಾಗಿ ಕಾರ್ಯನಿರ್ವಹಿಸಿದ್ದಾರೆ. (೫) ಬಸವ ಸಮಿತಿ ಬೆಂಗಳೂರಿನ ಹಿಂದೀ ತ್ರೈಮಾಸಿಕ ಪತ್ರಿಕೆ ಬಸವ ಮಾರ್ಗದ ಸಂಪಾದಕ ಮಂಡಳಿಯ ಸದಸ್ಯರಾಗಿದ್ದಾರೆ. ವಿಶೇಷವಾಗಿ ಇವರು ೧೯೯೪ರಲ್ಲಿ ಜರುಗಿದ ಬೀದರ ಜಿಲ್ಲೆಯ ನಾಲ್ಕನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಗೌರವ ಪಡೆದಿರುವುದು. ಅವರ ಸಾಮಾಜಿಕ ಹಾಗೂ ಸಾಹಿತ್ಯ ಕ್ಷೇತ್ರಕ್ಕೆ ಕೊಡುಗೆ. ಈಗ ಪುಸ್ತಕ ಪ್ರಾಧಿಕಾರದ ಸದಸ್ಯರಾಗಿ ಸೇವೆ ಸಲ್ಲಿಸುತ್ತಿರುವರು.

**ಪ್ರಶಸ್ತಿ, ಸನ್ಮಾನಗಳು :**

ಡಾ. ಅಂಬಲಗಿಯವರ ಇನ್ನಷ್ಟು ಕವನಗಳು ಕೃತಿಗೆ ಗುಲಬರ್ಗಾ ವಿಶ್ವವಿದ್ಯಾಲಯದ ರಾಜ್ಯೋತ್ಸವ ಪುರಸ್ಕಾರ ಕೌದಿ ಕವನ ಸಂಕಲನಕ್ಕೆ ಡಾ. ಮಲ್ಲಿಕಾರ್ಜುನ ಮನ್ಸೂರ ಪ್ರತಿಷ್ಠಾನ ರಾಯಚೂರ ಇವರ ಪುರಸ್ಕಾರ ದೊರೆತಿದೆ. ಹರಿಯಾಣದ ಪದ್ಮಶ್ರೀ ಡಾ. ಲಕ್ಷ್ಮೀನಾರಾಯಣ ದುಬೆ ಸ್ಮೃತಿ ಸನ್ಮಾನವಾಗಿದೆ. ಅವರ 'ಅಧೂರೆಶಬ್ದ' ಹಿಂದಿ ಕವನ ಸಂಕಲನಕ್ಕೆ ಮೂರು ಪುರಸ್ಕಾರಗಳು ದೊರೆತಿವೆ.

ಅವರ ಈ ಸಾಹಿತ್ಯ ಸೇವೆಯನ್ನು ಗಮನಿಸಿ ಹುಟ್ಟಿದ ಜಿಲ್ಲೆಯ ನಾಲ್ಕನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವವನ್ನು ನೀಡಿ ಸನ್ಮಾನಿಸಲಾಗಿದೆ. ನಾಡಿನ ಹಿರಿಯ ಸಾಹಿತಿಗಳು, ಕನ್ನಡ ಹಿಂದೀ ದಿನ ಪತ್ರಿಕೆಗಳು ಅಂಬಲಗೆಯವರ ಸಾಹಿತ್ಯ

ಕೃತಿಗಳ ಬಗ್ಗೆ ಮನತುಂಬಿ ಮಾತನಾಡಿರುವುದನ್ನು ಗಮನಿಸಬಹುದಾಗಿದೆ. ಇವಲ್ಲದೆ ಹಲವು ಊರು, ಕೇರಿಗಳಲ್ಲಿ, ಸಂಘ ಸಂಸ್ಥೆಗಳಲ್ಲಿ ಶಾಲಾ ಕಾಲೇಜುಗಳಲ್ಲಿ ಇಂದಿಗೂ ಇವರ ಸನ್ಮಾನ ಕಾರ್ಯಕ್ರಮಗಳು ನಡೆಯುತ್ತಲೇ ಇವೆ. ಅವರ ಮಿತ್ರರು ಒಂದು ಅಭಿನಂದನಾ ಗ್ರಂಥವನ್ನು ಪ್ರಕಟಿಸಲು ಆಲೋಚಿಸುತ್ತಿರುವ ಸಂಗತಿ ಸಂತೋಷದಾಯಕ ಮತ್ತು ಔಚಿತ್ಯಪೂರ್ಣ.

**ವ್ಯಕ್ತಿತ್ವ :**

ಬೀದರ ಜಿಲ್ಲೆಯ ತನ್ನದೇ ಆದ ವಿಶಿಷ್ಠ ಗತ್ತು, ಗಮ್ಮತ್ತುಗಳನ್ನು ಮೈಗೂಡಿಸಿಕೊಂಡಿರುವ ಡಾ. ಕಾಶಿನಾಥ ಅಂಬಲಗೆಯವರು ಯಾವತ್ತೂ ತಮ್ಮನ್ನು 'ಬೀದರಿ' ಎಂದು ಗುರುತಿಸಿಕೊಳ್ಳಲು ಹಾತೊರೆಯುತ್ತಾರೆ. ನಾವೆಲ್ಲ ಗೆಳೆಯವರು "ಬಿದರಿ ಕಭಿ ನಹಿ ಸುಧರಿ ಸುಧರಿತೋ ಸುಧರಿ ನಹಿ ತೋ ಬೀದರಿ" ಎಂದೆಲ್ಲಾ ಛೇಡಿಸಿದಾಗಲೂ ಅವರು ಹೃದಯ ತುಂಬಿ ದೊಡ್ಡದಾಗಿ[೧೫] ನಗುತ್ತಾರೆ. ಎಂದು ಅವರ ಸರಳ ವ್ಯಕ್ತಿತ್ವವನ್ನು ಪರಿಚಯಿಸುತ್ತಾರೆ. ಬೀದರ ಭಾಷೆಯ ಹೆಸರಿನಿಂದಲೇ ರೋಮಾಂಚನಗೊಳ್ಳುವ ಅಂಬಲಗೆಯವರು ಆಸ್ತಿತ್ವವಾಗಿ ಕವಿ ಅವರನ್ನು ಮೋಹಕಗೊಳಿಸಲು ಕನ್ನಡ ಕಾವ್ಯ, ಕೆಂಪು ಮಣ್ಣು, ಕಮ್ಮಗಿನ ಪುಂಡಿಪಲ್ಲೆ ಇವು ಮೂರೆ ಸಾಕು ಎಂಬುದನ್ನು ಮೀನಾಕ್ಷಿ ಬಾಳಿಯವರು ಕಂಡು ಕೊಂಡಿದ್ದಾರೆ. ಮೊಗಲಾಯಿಯ ಟಿಫಿಕಲ್ ಶೈಲಿಯಲ್ಲಿ ವಾದ ಮಾಡುವ ಕಾಶಿನಾಥರು ಬೀದರ ಬಗ್ಗೆ ತುಂಬಾ ಅಭಿಮಾನ ಹೊಂದಿರುವರು. ಇದರ ಕೆಂಪು ಮಣ್ಣಿನ ಕ್ರಾಂತಿಕಾರಕ ಗುಣವನ್ನು ಇಲ್ಲಿ ಹೊರ ಹೊಮ್ಮಿದ ಸಾಹಿತ್ಯದ ಸಿರಿಯನ್ನು ಸದಾ ಗುನಗುನಿಸಿ ಹೇಳುತ್ತಿರುತ್ತಾರೆ.

ಈ ಭಾಗದ ಪ್ರಸಿದ್ಧಕವಿ ಶಾಂತರಸರಿಂದ ಬೆನ್ನು ತಟ್ಟಿಸಿಕೊಂಡಿರುವ ಡಾ. ಅಂಬಲಗಿಯವರು ಶಾಂತರಸರ ಗರಡಿಯಲ್ಲಿಯೇ ಪಳಗಿದ್ದಾರೆ. ಅವರ ಕಿರಿಯ ತಲೆಮಾರಿನ ಕವಿಗಳಾಗಿರುವ ಇವರು ಈ ಭಾಗದ ಸಾಹಿತ್ಯ ಸಿರಿಯನ್ನು ಹೆಚ್ಚಿಸಲು ಹಟತೊಟ್ಟು ಹೆಣಗಿದ್ದಾರೆ. ತಾನೇಕೆ ಬರೆಯಬೇಕು ಎಂಬುದರ ಬಗ್ಗೆ ಸ್ಪಷ್ಟವಾದ ನಿಲವು ಹಗೂ ಗ್ರಹಿಕೆಗಳನ್ನು ಹೊಂದಿರುವ ಅಂಬಲಗೆಯವರಿಗೆ ಸಾಹಿತ್ಯ ಕ್ಷೇತ್ರ ತುಂಬಾ ಖುಷಿ ಕೊಟ್ಟಿದೆ. ನಿಜಾಲ ಆಡಳಿತದ ಈ ಪ್ರದೇಶದಲ್ಲಿಯ ಬದುಕು ಬವಣೆಗಳನ್ನು ಸ್ವತಃ ಅನುಭವಿಸಿರುವ ಡಾ. ಕಾಶೀನಾಥರ ಕವಿಹೃದಯ ಅದಕ್ಕಾಗಿ ಮಿಡಿದಿದೆ. ಸಂದರ್ಭ ಬಂದಾಗ ಸೆಟೆದು ಪ್ರತಿಭಟನೆಯ ಧ್ವನಿ ಹೊರಡಿಸಿ ಇಲ್ಲಿಯ ಚಾರಿತ್ರಿಕ ಒತ್ತಡದ ನಡುವೆಯೂ, ಅದಕ್ಕೆ ತಲೆಬಾಗದೆ ಕಾವ್ಯದ ಬದ್ದತೆಯನ್ನು ಕಾಯ್ದುಕೊಂಡು ನಿಂತಿರುವುದು

---

೧೫. ಡಾ. ಮೀನಾಕ್ಷಿ ಬಾಳಿ – ಮುನ್ನುಡಿ – ಚುಳುಕಾದಿರಯ್ಯಾ – ೨೦೦೬ ಪಟ ಸಂ. IV

ಅಂಬಲಗೆಯವರ ವ್ಯಕ್ತಿತ್ವದ ಹೆಗ್ಗಳಿಕೆ ಎನ್ನಬಹುದು.

ಈ ಮಣ್ಣಿನ ಮೂಲ ಸೆಲೆಯಾಗಿರುವ ವಚನಕಾರರ ದಟ್ಟ ಪ್ರಭಾವಕ್ಕೊಳಗಾಗಿರುವ ಅವರು ತಾನು ಒಲಿದಂತೆ ಹಾಡಿದ್ದಾರೆ. ಕಾವ್ಯಕಟ್ಟುವ ಕ್ರಿಯೆಯನ್ನು ಪ್ರಾಮಾಣಿಕವಾಗಿ ಕೈಕೊಂಡು ಅವುಗಳ ಮೂಲಕ ಸಾಮಾಜಿಕ ಜವಾಬಾರಿಯನ್ನು ನಿಭಾಯಿಸಿದ್ದಾರೆ. ಅವರ ಬರವಣಿಗೆಗಳಲ್ಲಿ ಮುಗ್ಧತೆಯೊಂದಿಗೆ ಅನೇಕ ಸಲ ಆತ್ಮವಿಮರ್ಶೆ ಹೊರಹೊಮ್ಮಿದ್ದು ಅವರ ವ್ಯಕ್ತಿತ್ವದ ದರ್ಶನ ಮಾಡಿಸುತ್ತದೆ.

ಪ್ರಗತಿಪರ ಆಲೋಚನೆಯುಳ್ಳ ಅಂಬಲಗಿಯವರು ಜೀವನ್ಮುಖಿ ಸಂಘರ್ಷಗಳಲ್ಲಿ ಆಗಾಗ ಸಿಲುಕಿಕೊಳ್ಳುತ್ತಾರೆ. ಬದುಕಿನಲ್ಲಿ ಸದಾ ಬದಲಾವಣೆಯ ಕನಸುಗಳನ್ನು ಕಾದಿಟ್ಟು ಕಾಯ್ದು ಕುಳಿತುಕೊಳ್ಳುವ ಅವರ ಕನಸು ಕಾವ್ಯದ ಅಭಿವ್ಯಕ್ತಿಯ ಮೂಲಕ ಈಡೇರುತ್ತದೆ ಎಂಬುದನ್ನು ಅವರ ವಾದಗಳಲ್ಲಿ ಕಾಣಬಹುದಾಗಿದೆ.

ಜೀವನದಲ್ಲಿ ನಡೆಯುವ ದಬ್ಬಾಳಿಕೆ, ಕಾರ್ಯಶೋಷಣೆ ಹಾಗೂ ಅತ್ಯಾಚಾರಗಳನ್ನು ಕಂಡು ಸಿಡಿದೇಳುತ್ತಾರೆ. ಇಂಥ ಸಂಗತಿಗಳನ್ನು ಎತ್ತಿಕೊಂಡು ರೋಷ, ರೊಚ್ಚುಗಳಿಂದ ಕಾವ್ಯಗಳಲ್ಲಿ ಸಹಜವಾಗಿ ಅಭಿವ್ಯಕ್ತಿಗೊಳಿಸುತ್ತಾರೆ. ಅಂತೆಯೇ ಬಂಡಾಯ ಚಳುವಳಿಗಾರರಲ್ಲಿ ಅವರೊಬ್ಬ ಉತ್ಸಾಹ ಬರಹಗಾರರಾಗಿ ಕಾಣಿಸುತ್ತಿದ್ದಾರೆ.

ಮಗು ಹಾಲು ಕೇಳುತ್ತದೆ
ತಾಯಿ ಅಸಹಾಯಕಳಾಗಿದ್ದಾಳೆ
ತಂದೆ ಹೊರಗೆ ಇಟುಕುತ್ತಾನೆ
ಗುಂಡು ವೇಗವಾಗಿ ಎದೆಯೆಡೆಗೆ ಬರುತ್ತದೆ[16]

ಎಂಬಂತಹ ಚುಟುಕುಗಳ ಮೂಲಕ ಅವರು ಬದುಕಿಗೆ ಹೆಚ್ಚು ಹತ್ತಿರವಾಗಿರುವುದನ್ನು ಗುರುತಿಸಬಹುದು. ಸೃಜನಶೀಲ ವ್ಯಕ್ತಿತ್ವವುಳ್ಳ ಇವರು ಕಾವ್ಯವನ್ನು ಕ್ರಾಂತಿಯ ಜನನಿ ಎಂದು ಭಾವಿಸುತ್ತಾರೆ. ಹಿಂದೀ ಹಾಗೂ ಕನ್ನಡ ಭಾಷೆಗಳೆರಡರಲ್ಲೂ ಪಾಂಡಿತ್ಯ ಪಡೆದಿರುವ ಅಂಬಲಗೆಯವರು ಸಹಜ ಕವಿ. ಹಲವು ಭಾಷೆಗಳಲ್ಲಿಯ ಸಂವೇದನೆಗಳನ್ನು ತಾವು ಓದಿ ಅರ್ಥಮಾಡಿಕೊಂಡು ಅವುಗಳನ್ನು ತನ್ನ ಜನಾಂಗಕ್ಕೆ ಉಣಿಸಬೇಕೆಂಬ ಮಹತ್ವಕಾಂಕ್ಷಿಯುಳ್ಳವರು. ತನ್ನ ನೆಲ–ಜಲ–ಭಾಷೆ ಹಾಗೂ ಜನರನ್ನು ಅದಮ್ಯವಾಗಿ ಪ್ರೀತಿಸುವ ಇವರನ್ನು ಪ್ರೀತಿಯ ಕವಿ ಎಂದು ಗುರುತಿಸಲಾಗಿದೆ. ಜೀವನದ ಸಾರ್ಥಕವನ್ನು ಬರವಣಿಗೆಯ ಮೂಲಕ ತೋರಿಸುವ ಇವರದು ಸಾರ್ಥಕ ಬದುಕಿನ ವ್ಯಕ್ತಿತ್ವ.

ನೊಂದ ವಿದ್ಯಾರ್ಥಿಗಳಿಗೆ ಸಾಂತ್ವನ ಹೇಳಿ ಅವರನ್ನು ಸರಿದಾರಿಗೆ ತರುವ ಶಕ್ತಿ ವಿಶೇಷವಾಗಿ ಗ್ರಾಮೀಣ ವಿದ್ಯಾರ್ಥಿಗಳನ್ನು ಅವರು ಉಪದೇಶಿಸುವ ಪರಿ ಎಂಥವರನ್ನು ಆಶ್ಚರ್ಯಗೊಳಿಸುತ್ತದೆ. ಸದಾ ಜೀವನೋತ್ಸಾಹದಿಂದ ಪುಟಿಯುತ್ತಿರುವ ಡಾ. ಕಾಶಿನಾಥ ಅಂಬಲಗಿಯವರು ಈಗ ಅರವತ್ತರ ಸಮೀಪದಲ್ಲಿರುವ ತರುಣರು. ಉಭಯ ಭಾಷಾ

ಪ್ರವೀಣರಾಗಿರುವ ಅವರು ಶ್ರೇಷ್ಠ ಅನುವಾದಕರು. ಜಾನಪದ ಪ್ರಭಾವದಿಂದ ಎಂದೂ ಬಿಡಿಸಿಕೊಳ್ಳದ ಈ ಸೃಜನಶೀಲ ವ್ಯಕ್ತಿ ಇನ್ನೂ ಬೆಳೆಯುತ್ತಿರುವ ಕೆಂಪು ಮಣ್ಣಿನ ಕವಿ. ಮುಂದಿನ ಯುವ ಕವಿ ಹಾಗೂ ಬರಹಗಾರರ ಮೇಲೆ ತನ್ನ ವ್ಯಕ್ತಿತ್ವದ ದಟ್ಟ ಪ್ರಭಾವವನ್ನು ಉಳಿಸಿ ಹೋಗಬಲ್ಲ ಲೇಖಕ ಎಂದು ಹೇಳಬಹುದು. ಅದರಲ್ಲೂ ಈ ಭಾಗದ ಒಬ್ಬ ಪ್ರಮುಖ ಅನುವಾದಕರಾಗಿ ಅವರು ಕೆಲಸ ಮಾಡುತ್ತಿರುವುದು ಈ ಭಾಗಕ್ಕೆ ಅವರು ನೀಡಿದ ಪ್ರಮುಖ ಕೊಡುಗೆ ಎನ್ನಬಹುದು.

ಅಧ್ಯಾಯ : 3

## ಡಾ. ಕಾಶಿನಾಥ ಅಂಬಲಗೆ ಅವರ ಮೂರು ಕಾವ್ಯಾನುವಾದಗಳು

ಅನುವಾದವಿಲ್ಲದ ಸಾಹಿತ್ಯ ಬಹುಶಃ ಯಾವುದೂ ಇಲ್ಲ ಎಂಬ ಒಂದು ಮಾತಿದೆ. ಇದು ಅನುವಾದದ ಸೃಜನಶೀಲತೆಯನ್ನು ಹಾಗೂ ಅನುವಾದದ ವ್ಯಾಪಕತೆಯನ್ನು ತಿಳಿಸುತ್ತದೆ. ಕನ್ನಡ ಸಾಹಿತ್ಯದ ಆರಂಭವು ಹೆಚ್ಚು ಕಡಿಮೆ ಅನುವಾದದ ರೂಪದಲ್ಲಿಯೇ ಕಾಣಿಸಿಕೊಂಡಿರುವುದನ್ನು ನಾವಿಂದು ಅಲ್ಲಗಳೆಯಲಾಗುವುದಿಲ್ಲ. ಪಂಪ, ರನ್ನ, ಪೊನ್ನ, ನಾಗವರ್ಮ, ನಾಗಚಂದ್ರ, ಜನ್ನರ ಕೃತಿಗಳಲ್ಲಿ ಅನುವಾದದ ಪ್ರಧಾನ ಅಂಶಗಳಿದ್ದು ಮೂಲವಸ್ತುವಿಗೆ ಇವರು ಸಮಕಾಲೀನತೆಯನ್ನು ಬೆರಸಿ ಸೃಜನಗೊಳಿಸಿದ್ದು ಸುಸ್ಪಷ್ಟವಾಗಿರುವ ಸಂಗತಿ. ಇದು ಒಂದು ದೃಷ್ಠಿಯಿಂದ ಕನ್ನಡ ಸಾಹಿತ್ಯದ ಮಹತ್ವವನ್ನು ಹಾಗೂ ವ್ಯಾಪಕತೆಯನ್ನು ವಿಸ್ತರಿಸಿ ತಂದು ಹೇಳಬಹುದು. ಆದರೆ 12ನೆಯ ಶತಮಾನದಿಂದ 19ನೆಯ ಶತಮಾನದವರೆಗಿನ ಕಾಲ ಅನುವಾದದ ದೃಷ್ಟಿಯಿಂದ ಬರಡೆನಿಸಿತು.

ಹೊಸಗನ್ನಡದ ಸಾಹಿತ್ಯಾವಧಿಯಲ್ಲಿ ಪುನಃ ಅನುವಾದ ಸಾಹಿತ್ಯಕ್ಕೆ ಜೀವತುಂಬಿದ ಅನೇಕ ಅನುವಾದಕರು ನಮ್ಮಲ್ಲಿ ಕಾಣಸಿಗುತ್ತಾರೆ. ಮೊದಲು ಇಂಗ್ಲೀಷಿನಿಂದ ಕಾವ್ಯವನ್ನು ಕನ್ನಡಕ್ಕೆ ತಂದದು. ಸಂಸ್ಕೃತದ ನಾಟಕಗಳನ್ನೂ ಕನ್ನಡಕ್ಕೆ ಭಾಷಾಂತರಿಸಿ, ಆಮೇಲೆ ಹಿಂದೀಯ ಕಾವ್ಯಗಳನ್ನು ಹಾಗೂ ಇತರ ಭಾರತೀಯ ಭಾಷೆಯ ಕವನಗಳನ್ನು ಹಿಂದಿ ಮೂಲಕ ಕನ್ನಡಕ್ಕೆ ಅನುವಾದಿಸಿದರು.

ಇಂಗ್ಲೀಷಿನ ಕಾವ್ಯವನ್ನು ಕನ್ನಡಕ್ಕಿಳಿಸುವ ಕೆಲಸಕ್ಕೆ ಸುಮಾರು ಒಂದು ಶತಮಾನದ ಇತಿಹಾಸವಿದೆ. ಎಸ್.ಜಿ. ನರಸಿಂಹಾಚಾರ್ಯರು ಈ ದಿಕ್ಕಿನಲ್ಲಿ ಕೆಲಸಮಾಡಿದ ಮೊದಲಿಗ್ಬರೆಂದೂ ಶ್ರೀಯವರು ತಮ್ಮ ಇಂಗ್ಲೀಷ ಗೀತೆಗಳನ್ನು ಪ್ರಕಟಿಸುವ ಒಂದೆರಡು ದಶಕಗಳ ಮೊದಲೇ ಹಟ್ಟಿಯಂಗಡಿ ನಾರಾಯಣರು, ಪಚಿಜೇ ಮಂಗೇಶರಾಯರು ಹಾಗೂ ಗೋವಿಂದ ಪೈಗಳಯ ಕೆಲವು ಇಂಗ್ಲೀಷ ಕವನಗಳನ್ನು ಕನ್ನಡಕ್ಕೆ ತಂದಿದ್ದರೆಂದು ನಮಗೆ ತಿಳಿದು ಬಂದಿದೆ.[೧] ಕನ್ನಡ ಕಾವ್ಯದ ಸಮಪ್ರದಾಯತೆಯನ್ನು ಒಡೆದು ಪ್ರತಿ ಅಂಶದಲ್ಲಿಯೂ ಒಡೆದು ಕಾಣುವ ಹೊಸತನವನ್ನು ತಂದ ಶ್ರೀಯುತರ ಇಂಗ್ಲೀಷ ಗೀತೆಗಳು ಪ್ರಕಟವಾದ 1926ರವರೆಗೆ ಕನ್ನಡ ಕಾವ್ಯ ಹೊಸ ದಿಕ್ಕಿನ ಕಡೆಗೆ ಮುಖ ಮಾಡಿರಲಿಲ್ಲ. ಅಂದರೆ ಕನ್ನಡದ ಸಾಹಿತ್ಯಕ್ಕೆ ಹೊಸತನ ಪ್ರವೇಶವಾದುದು ಇಂಗ್ಲೀಷಿನ ಅನುವಾದದ ಮೂಲಕವೇ

---

೧. ಶ್ರೀ ಬಿ.ಸಿ. ರಾಮಚಂದ್ರ ಶರ್ಮಾ – ಕಾವ್ಯ ಅನುವಾದ ಒಂದು ಚಿಮತನೆ ಪುಟ ಸಂ. ೧೦೦

ಎನ್ನಬಹುದು.

ಉತ್ತರ ಕರ್ನಾಟಕದಲ್ಲಿ ಅನುವಾದದ ಕಡೆಗೆ ಮುಖ ಮಾಡಿದವರು. ಬಹಳ ಕಡಿಮೆ ಎನ್ನಬಹುದು. ಅದರಲ್ಲೂ ಹೈದ್ರಾಬಾದ ಕರ್ನಾಟಕದ ಭಾಗದಲ್ಲಿ ಅನುವಾದಕರು ಇನ್ನೂ ವಿರಳ ಸಂಖ್ಯೆಯಲ್ಲಿ ದೊರೆಯುತ್ತಾರೆ. ಅವರಲ್ಲಿ ಎದ್ದು ಕಾಣುವ ಹೆಸರುಗಳೆಂದರೆ ಪಂಚಾಕ್ಷರಿ ಹಿರೇಮಠ, ಕೆ. ಶಾರದಾ, ಪ್ರೊ. ಬಾಲಚಂದ್ರಜಯಶೆಟ್ಟಿ, ಮಲ್ಲಿಕಾರ್ಜುನ ಹಿರೇಮಠ, ತೇಜಸ್ವಿ, ಕಟ್ಟಿಮನಿ, ಡಾ. ವಿಠ್ಠಲರಾವ ಗಾಯಕವಾಡ, ಎಂ. ಲಕ್ಷ್ಮಣ, ಚಿದಾನಂದ ಸಾಲಿ, ಶ್ರೀ ಬಂಡೆಪ್ಪ ಖೂಬಾ ಮುಂತಾದವರು ಇವೆರೆಲ್ಲರ ಸಾಲಿನಲ್ಲಿ ಎದ್ದು ಕಾಣುವವರೆಂದರೆ ಡಾ. ಕಾಶಿನಾಥ ಅಂಬಲಗೆಯವರು.

ಹೈದ್ರಾಬಾದ ಕರ್ನಾಟಕದ ವಿಭಾಗದ ಈ ಎಲ್ಲ ಅನುವಾದಕರಲ್ಲಿ ಕೆಲವರು ತೆಲಗು ಸಾಹಿತ್ಯವನ್ನು ಕನ್ನಡಕ್ಕೆ ಕೆಲವರು ಕನ್ನಡ ಸಾಹಿತ್ಯವನ್ನು ಹಿಂದಿ ಭಾಷೆಗೆ, ಹಲವರು ಭಾಷೆಯ ಸಾಹಿತ್ಯವನ್ನು ಕನ್ನಡಕ್ಕೆ ಅನುವಾದ ಮಾಡಿದವರಾಗಿದ್ದಾರೆ. ಆದರೆ ಡಾ. ಕಾಶಿನಾಥ ಅಂಬಲಗಿಯವರು ಹಿಂದೀಯಿಂದ ಕನ್ನಡಕ್ಕೆ ಕನ್ನಡದಿಂದ ಹಿಂದೀ ಭಾಷೆಗೆ ಅನುವಾದ ಮಾಡಿದವರಲ್ಲಿ ಪ್ರಮುಖರಾಗಿರುವರು.

ಹೈದ್ರಾಬಾದ ಕರ್ನಾಟಕ ಪ್ರದೇಶ ಬಹಳ ವರ್ಷಗಳ ಕಾಲ ಹೈದ್ರಾಬಾದ ನಿಜಾಮನ ಆಡಳಿತಕ್ಕೂ ಹಾಗೂ ಏಕಕಾಲಕ್ಕೆ ಬ್ರಿಟೀಷರ ಆಡಳಿತಕ್ಕೂ ಒಳಪಟ್ಟಿರುವದರಿಂದ ಇಲ್ಲಿ ಉರ್ದು ಹಾಗೂ ಇಂಗ್ಲೀಷ ಭಾಷೆಗಳ ಪ್ರಭಾವ ಹೆಚ್ಚಾಗಿತ್ತು. ಅದರಲ್ಲೂ ಗಡಿ ಜಿಲ್ಲೆಯಾಗಿರುವ ಬೀದರ ಮೇಲೆ ಗಡಿ ರಾಜ್ಯ ಭಾಷೆಗಳಾದ ಮರಾಠಿ ಹಾಗೂ ತೆಲಗುವಿನ ಜೊತೆಗೆ ಹಿಂದೀ ಭಾಷೆಯ ಪ್ರಭಾವವೂ ಹೆಚ್ಚಾಗಿತು. ಕರ್ನಾಟಕದ ಯಾವುದೇ ಭಾಗದಲ್ಲೂ ದೊರೆಯದ ಭಾಷೆಗಳ ಸಂಪರ್ಕ ಈ ಭಾಗಕ್ಕೆ ದೊರೆಕಿತು. ಇದರಿಂದ ಕನ್ನಡ ಭಾಷೆಯು ಮನೆಯಲ್ಲಿ ಬದುಕಬೇಕಾಗಿ ಬಂದರೂ ಈ ಉಳಿದ ಭಾಷೆಗಳ ಸಂಪರ್ಕದಿಂದಾಗಿ ಕನ್ನಡವು ಇಲ್ಲಿ ವಿಶಿಷ್ಟವಾಗಿ ಬೆಳೆಯಿತು. ಅದರಲ್ಲೂ ಡಾ. ಕಾಶಿನಾಥ ಅಂಬಲಗಿಯವರು ಈ ಹಲವು ಭಾಷೆಗಳ ಮಿಶ್ರಣವನ್ನು ಸದುಪಯೋಗ ಪಡಿಸಿಕೊಂಡು ದ್ವಿಭಾಷಾ ವಿಶಾರದರಾದರು. ಅಷ್ಟೇ ಅಲ್ಲ ಪರಸ್ಪರ ಹಿಂದೀ–ಕನ್ನಡದ ಕೊಡುಕೊಳ್ಳುವಿಕೆಯನ್ನು ಗಮನಿಸಿ ಅನುವಾದಕ್ಕೆ ಮನಸ್ಸು ಮಾಡಿದ್ದು ಈ ಭಾಗದ ಸಾಹಿತ್ಯಕ್ಕೆ ಅವರು ನೀಡಿದ ಕೊಡುಗೆ ಎನ್ನಬಹುದು.

ಕನ್ನಡ ಸಾಹಿತ್ಯದ ಕಂಪನ್ನು ಹಿಂದೀ ಭಾಷೆಗೆ ಹರಡಿದ್ದು ಇಲ್ಲಿ ಒಂದು ತೆರನಾಗಿದ್ದರೆ ಅನ್ಯಭಾಷೆಗಳ ಸಾಹಿತ್ಯ ಹಾಗೂ ಸಾಂಸ್ಕೃತಿಕ ಪರಿಮಳವನ್ನು ಕನ್ನಡಕ್ಕೆ ತಂದಿರುವುದು ಎರಡನೆಯ ಪ್ರಕಾರವಾಗಿದೆ. ಈ ತೆರನಾಗಿರುವ ಅನುವಾದಗಳು ಪರಸ್ಪರ ಭಾಷೆಗಳ ಶ್ರೀಮಂತಿಕೆಯನ್ನು ಹೆಚ್ಚಿಸುವದರೊಂದಿಗೆ, ಕನ್ನಡ ಭಾಷೆಯ ಸಮೃದ್ಧಿಯನ್ನು ಹೆಚ್ಚಿಸುತ್ತದೆ. ಇಂಥ ಕಾರ್ಯ ಮಾಡಿದವರಲ್ಲಿ ಡಾ. ಕಾಶಿನಾಥ ಅಂಬಲಗಿಯವರು ಅತಿ ಮುಖ್ಯರಾಗುತ್ತಾರೆ. ಅದರಲ್ಲೂ ಕಾವ್ಯಾನುವಾದಕ್ಕೆ ಹೆಸರಾಗಿರುವ

ಡಾ. ಪಂಚಾಕ್ಷರಿ ಹಿರೇಮಠ, ಪ್ರೊ. ಬಾಲಚಂದ್ರ ಜಯಶೆಟ್ಟಿ, ದತ್ತಾತ್ರೇಯ ರಾವ ಹಿರೂರ, ಎಂ. ದಸ್ತಗೀರ, ಪ್ರೊ. ಆರ್.ಕೆ. ಹುಡಗಿ, ಇಟಗಿ ಈರಣ್ಣ, ರೇವಣ ಸಿದ್ದಯ್ಯ, ವೀರೇಂದ್ರ ಸಿಂಪಿ ಇವರುಗಳ ಸಾಲಿನಲ್ಲಿ ಎದ್ದು ಕಾಣುವವರಾಗಿದ್ದಾರೆ ಡಾ. ಅಂಬಲಗೆಯವರು.

ಉತ್ತಮವಾದುದು ಜನಪರಧೋರಣೆಯುಳ್ಳದ್ದು ಎಲ್ಲಿಯೇ ಇರಲಿ ಅದನ್ನು ಗ್ರಹಿಸುವ ಹಾಗೂ ಅದನ್ನು ತನ್ನತನಕ್ಕೆ ಅಳವಡಿಸಿಕೊಳ್ಳಲು ಪ್ರಯತ್ನಿಸುವ ಪ್ರವೃತ್ತಿ ಡಾ. ಅಂಬಲಗಿಯವರದು. ಅಷ್ಟೇ ಅಲ್ಲ ಅದನ್ನು ಸಾಹಿತ್ಯ ಮಾಧ್ಯಮದ ಮೂಲಕ ತನ್ನವರಿಗೆ ವಿಸ್ತರಿಸಿ ಹೇಳುವದು ಶ್ರೇಷ್ಠವಾದುದೆಂದು ಭಾವಿಸುವ ಅವರು ತಮ್ಮ ಸ್ವರಚಿತ ಕವನಗಳ ಮೂಲಕ ಅವುಗಲನ್ನು ಅಭಿವ್ಯಕ್ತಿ ಪಡಿಸುವದಲ್ಲದೇ ಹಿಂದೀ ಭಾಷೆಯಲ್ಲಿ ರಚಿತಗೊಂಡಿರುವ ಅನೇಕ ಕಾವ್ಯಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಅಂಥ ಕಾವ್ಯಾನುವಾದಗಳೆಂದರೆ

(1) ಕೋಗಿಲೆ ಅಳುತಿದೆ – (1993)

(2) ಸಮಕಾಲಿನ ಪಂಜಾಬಿ ಕವಿತೆಗಳು – (1994)

(3) ಓದಿ ಅಳುವುದು – (2002)

ಈ ಮೂರು ಕಾವ್ಯಾನುವಾದಗಳು ವಿಭಿನ್ನ ಪರಿಸರ, ವಿಭಿನ್ನ ಕಾಲ, ಹಾಗೂ ವಿಭಿನ್ನ ಉದ್ದೇಶಗಳಿಗನುಗುಣವಾಗಿ ಅನುವಾದಗೊಂಡಿದ್ದು ಅವುಗಳಲ್ಲಿ ಕಾಣಿಸುವ ಗುಣಾತ್ಮಕತೆಯ ಕನ್ನಡ ಅನುವಾದ ಸಾಹಿತ್ಯಕ್ಕೆ ಒಂದು ಮಹತ್ವದ ಕೊಡುಗೆಯಾಗಿ ಪರಿಣಮಿಸಿದೆ. ಅವುಗಳನ್ನು ಒಂದೊಂದಾಗಿ ವಿವೇಚನೆಗೊಳಪಡಿಸಿ ಅಧ್ಯಯನ ಮಾಡುವುದರೊಂದಿಗೆ ಆ ಕೃತಿಗಳಲ್ಲಿರುವ ಮಹತ್ವವನ್ನು ನಾವು ಗುರುತಿಸಬಹುದು.

## • ಅನುವಾದ ಸಾಹಿತ್ಯದ ಪೂರ್ವಪರ

ಇಂದಿನ ವೈಜ್ಞಾನಿಕ ಸಾಧನೆ ಹಾಗೂ ಉಪಕರಣಗಳು ವಿಶ್ವದ ಇಲ್ಲಾ ರಾಷ್ಟ್ರಗಳನ್ನು ಪರಸ್ಪರ ಹತ್ತಿರಕ್ಕೆ ತಂದು ನಿಲ್ಲಿಸಿವೆ. ಇಂತಹ ಸ್ಥಿತಿಯಲ್ಲಿ ಅನ್ಯದೇಶ ಭಾಷೆಗಳ ಸಾಹಿತ್ಯ, ಸಂಸ್ಕೃತಿ, ಸಾಮಾಜಿಕ ಸಂಬಂಧ ಮುಂತಾದವುಗಳನ್ನು ಕುರಿತು ಅಂತುಕೊಳ್ಳುವ ಜಿಜ್ಞಾಸೆ ಪ್ರಬುದ್ಧ ವರ್ಗದಲ್ಲಿ ಹುಟ್ಟಿಕೊಳ್ಳುತ್ತದೆ. ಆ ನಿಮಿತ್ತ್ಯ ಆಚೆಯಾದೇಶ ಭಾಷೆಗಳ ಸಾಹಿತ್ಯ ಸಂಸ್ಕೃತಿ ಒಟ್ಟಾರೆ ಬದುಕಿನ ಒಳನೋಟಗಳನ್ನು ಅರಿತುಕೊಳ್ಳುವಲ್ಲಿ ಅನುವಾದ ಸಾಹಿತ್ಯ ತುಂಬಾ ಸಹಾಯಕವಾಗುತ್ತದೆ. ಇಂದು ಇದರ ಅವಶ್ಯಕತೆ ಅನಿವಾರ್ಯ. ಅನುವಾದ, ಭಾಷಾಂತರ, ರೂಪಾಂತರ, ತರ್ಜುಮೆ ಈ ಮುಂತಾದ ಪದಗಳು ಇಂದು ಸಮನಾರ್ಥದಲ್ಲಿ ಬಳಸಲಾಗುತ್ತಿದೆ.

'Translation' ಎಂಬ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಬಳಕೆಯಾಗುವ ಪದಗಳು ಭಾಷಾಂತರ, ತರ್ಜುಮೆ ಮತ್ತು ಅನುವಾದ. 'ಅನುವಾದ' ವದ್ – ಮೂಲಧಾತುವಾಗಿದ್ದು, ಅದಕ್ಕೆ ಅನು–ಉಪಸರ್ಗವು ಸೇರಿ, ಅನುವಾದ ಪದದ ನಿಷ್ಪತ್ತಿಯಾಗಿದೆ. ಆಷ್ಟೆಯವರ 'ಸಂಸ್ಕೃತ ಕೋಶ' ದಲ್ಲಿ ಅನುವಾದವೆಂದರೆ – "ಪ್ರಾಪ್ತಸ್ಯ ಮನಃ ಕಥನ" ಅಥವಾ 'ಜ್ಞಾಥಾರ್ಥಸ್ಯ ಪ್ರತಿಪಾದನ'[೧] ಎಂದು ಹೇಳಲಾಗಿದೆ ಅಂದರೆ ಪೂರ್ವದಲ್ಲಿ ಹೇಳಿದ್ದನ್ನು ಇನ್ನೊಮ್ಮೆ ಹೇಳುವುದು ಎಂದರ್ಥವಾಗುತ್ತದೆ.

ಭಾಷಾಂತರ ಶಬ್ದದ ಸಂಸ್ಕೃತ ಅರ್ಥ ಇನ್ನೊಂದು ಭಾಷೆ ಎಂದು ಇಲ್ಲಿ ರೂಡಾರ್ಥವೆಂದರೆ ಇನ್ನೊಂದು ಭಾಷೆಯಲ್ಲಿ ಹೇಳುವುದು. ಒಂದು ಭಾಷೆಯಲ್ಲಿ ಹೇಳಿದ ವಿಷಯವನ್ನು ಇನ್ನೊಂದು ಭಾಷೆಯಲ್ಲಿ ಹೇಳುವುದು ಭಾಷಾಂತರ. ಒಂದು ಭಾಷೆಯಲ್ಲಿನ ಭಾವನೆಗಳನ್ನು, ಅನುಭವಗಳನ್ನು, ಆ ಭಾಷೆಯನ್ನು ತಿಳಿಯದವರು, ತಿಳಿಯುವಂತೆ ಮಾಡುವುದಕ್ಕಾಗಿ ಆಯಾ ಭಾಷೆಯ ಜಾಯಮಾನಕ್ಕೆ ಬಗ್ಗುವಂತೆ ವರ್ಗಾಯಿಸುವ ಪ್ರಕ್ರಿಯೆಯನ್ನು ಅನುವಾದ ಎನ್ನುತ್ತೇವೆ. ಅದನ್ನೆ A.H. Smith ಯಥಾ ಸಾಧ್ಯವಾಗಿ ಅರ್ಥವನ್ನು ಉಳಿಸಿಕೊಂಡು, ಒಂದು ಭಾಷೆಯಿಂದ ಇನ್ನೊಂದು ಭಾಷೆಯಲ್ಲಿ ಅಥವಾ ಅಂತಕರಣದ ಪ್ರಕ್ರಿಯೆ ಅನುವಾದವಾಗಿದೆ ಎನ್ನುತ್ತಾರೆ. ಅಂದರೆ ಒಂದು ಅನುಭವ ದ್ರವ್ಯವನ್ನು ಇನ್ನೊಂದು ಮಾಧ್ಯಮಕ್ಕೆ ವರ್ಗಾಯಿಸಿ ಅಭಿವ್ಯಕ್ತಗೊಳಿಸುವ ಕ್ರಿಯೆ ಅನುವಾದ[೨] ಎಂಬುದನ್ನು ಎಲ್ಲರೂ ಅನುಮೋದಿಸುತ್ತಾರೆ.

ಕ್ಯಾಟ್‌ಫರ್ಡ (Catford) ಅವರು– ಮೂಲಭಾಷೆಯ ಪಠ್ಯ ಸಾಮಗ್ರಿಯನ್ನು

---

೧. ಡಾ. ಜಿ.ಎಸ್. ಕುಳ್ಳಿ – ಅನುವಾದ ಕಲೆ ೧೯೭೫ – ಪುಟ ಸಂ. ೧

೨. ಡಾ. ಎಂ.ಎಸ್. ಲಠ್ಠೆ – ನಮ್ಮ ಅನುವಾದಕ ೨೦೦೪ – ಪುಟ ಸಂ. ೧೧೭

ಉದ್ದಿಷ್ಟ ಭಾಷೆಯ ಪಠ್ಯ ಸಾಮಗ್ರಿಯನ್ನಾಗಿ ಪರಿವರ್ತಿಸುವದ್ದೇ ಅನುವಾದ[೩] ಎನ್ನುತ್ತಾರೆ. ಅನುವಾದ ಕ್ರಿಯೆಯ ಮೂಲದಲ್ಲಿ ಎರಡು ಭಾಷೆಗಳು ಇರುತ್ತವೆ. ಒಂದು ಮೂಲಕೃತಿಯ ಭಾಷೆ. ಇದಕ್ಕೆ ಮೂಲ ಭಾಷೆಯೆನ್ನುತ್ತಾರೆ. ಮೂಲ ಭಾಷೆಯ ಒಂದು ಕೃತಿಯನ್ನು ನಮಗೆ ಬೇಕಾದ ಭಾಷೆಯಲ್ಲಿ ಭಾಷಾಂತರ ಮಾಡುವದೇ ಅನುವಾದದ ಉದ್ದೇಶವಾಗಿದೆ. ಹೀಗಾಗಿ ಯಾವ ಭಾಷೆಯಲ್ಲಿ ಆ ಕೃತಿಯನ್ನು ಅನುವಾದಿಸುವದು ನಮ್ಮ ಉದ್ದೇಶವಾಗಿದೆಯೋ ಆ ಭಾಷೆಯನ್ನು ಉದ್ದಿಷ್ಠ ಭಾಷೆ ಎನ್ನಲಾಗುತ್ತದೆ. ಅನುವಾದ ಕ್ರಿಯೆ ಎಂಬುದು ಮೂಲ ಭಾಷೆಯ ಪಠ್ಯ ಸಾಮಗ್ರಿಯನ್ನು ಉದ್ದಿಷ್ಠ ಭಾಷಾ ಸಾಮಗ್ರಿಗೆ ಅಳವಡಿಸುವದು. ಇದು ಹೇಳಿದ್ದಷ್ಟು ಸುಲಭವಾದ ಸಂಗತಿಯಾಗಿರುವದಿಲ್ಲ. ಯಾಕೆಂದರೆ ನಿಜವಾದ ಅನುವಾದವು 'ಪರಮನಃ ಪ್ರವೇಶ' ವೆಂದು ವಿಲಾಮೋವಿಚ್ (Wilamavitz)[೪] ಹೇಳುತ್ತಾರೆ. ಇದರರ್ಥವೆಂದರೆ ಒಳ್ಳೆಯ ಅನುವಾದವು ಮೂಲದಷ್ಟೇ ಬೆಲೆಯನ್ನು ಪಡೆಯುತ್ತದೆ ಎಂಬುದು ನಿಜವಾದ ಅನುವಾದಕ ಮೂಲ ಕರ್ತೃವಿನ ಮನಃಸ್ಥಿತಿಯನ್ನು ಅರಿಯಬೇಕಾಗುತ್ತದೆ. ಕೃತಿಯ ಕಾಲ, ಸನ್ನಿವೇಶ, ಉದ್ದೇಶಗಳನ್ನು ಚೆನ್ನಾಗಿ ತಿಳಿದು ಕೊಂಡಿರಬೇಕಾದುದು ಅತಿ ಅವಶ್ಯ. ಆದರೆ ಈ ಎಲ್ಲಕ್ಕಿಂತ ಹೆಚ್ಚಾಗಿ ಆ ಕೃತಿಯ ಕರ್ತೃವಿನ ಆಶಯನ್ನು ಸಂಪೂರ್ಣ ಅರಿತಷ್ಟು ಅನುವಾದ ಮೂಲಕ್ಕೆ ಹೆಚ್ಚು ಸಮೀಪವಾಗುತ್ತದೆ.

ಅನುವಾದ ಮೂಲವರ್ತಿಯಾಗಿರಬೇಕೆಂಬ ತತ್ವದ ಅವಶ್ಯಕತೆ ಏನೆಂದರೆ, ಅನುವಾದಕನು ತನ್ನ ಕರ್ತವ್ಯವನ್ನು ಅರಿತು ತನ್ನ ಕಾರ್ಯ ಮಾಡಬೇಕೆಂಬುದೇ ಆಗಿರುತ್ತದೆ. ಮೂಲಕೃತಿಯ ಕತೃವಿಗೂ ಅನುವಾದಕನಿಗೂ ಅಂತರವಿದೆ ಅನುವಾದಕನಾದವನು ತಾನೆ ಕರ್ತೃವಾಗಬಾರದು: ಅವನ ಕಾರ್ಯವೆಂದರೆ ಮೂಲಕೃತಿ ಹಾಗೂ ಓದುಗನ ನಡುವಿನ ಸುವರ್ಣ ಕೊಂಡಿಯಾಗುವುದು* ಮೂಲವನ್ನು ಓದುಗನಿಗೆ ಮುಟ್ಟಿಸುವ ಈ ಕಾರ್ಯದಲ್ಲಿ ಅನುವಾದಕನ ಎಷ್ಟಷ್ಟು ತನ್ನ ವ್ಯಯಕ್ತಿಕತೆಯನ್ನು ಮರೆತು ಮೂಲಕೃತಿಯೊಡನೆ ತಾದಾತ್ಮ್ಯ ಹೊಂದಿ ಮೂಲಕೃತಿಯನ್ನು ಪ್ರತಿಬಿಂಬಿಸುತ್ತಾನೋ ಅಷ್ಟಷ್ಟು ಅನುವಾದ ಕೃತಿ ಓದುಗನಿಗೆ ಮುಟ್ಟುತ್ತದೆ.

ಈ ರೀತಿಯ ಅನುವಾದ ಕಾರ್ಯಕ್ಕಾಗಿ ಥಿಯೋಡೋರ್ ಸ್ಯಾವ್ರೋರಿ (Theodore Savory) ಅವರು ೧೨ ಅನುವಾದ ತತ್ವಗಳನ್ನು ಹೇಳಿದ್ದಾರೆ. ಅವುಗಳೆಂದರೆ

---

೩. Catford – Lingustic Theory of Translation

೪. Alfred Savory Art of Translation

* ಜಿ.ಎಸ್. ಕುಳ್ಳಿ – ಅನುವಾದ ಕಲೆ – ೧೯೭೫ – ಪುಟ ಸಂ. ೩೮

1) A translation must give the words of the original
(ಮೂಲ ಶಬ್ದಗಳನ್ನು ಅಭಿವ್ಯಕ್ತಿಗೊಳಿಸಬೇಕು)

2) A translation must give the words of the original
(ಮೂಲ ಶಬ್ದಗಳನ್ನು ಅಭಿವ್ಯಕ್ತಿಗೊಳಿಸಬೇಕು)

3) A translation should read like on original work
(ಮೂಲದ ವಿಚಾರಗಳ ಅಭಿವ್ಯಕ್ತಿಯಾಗಿರಬೇಕು)

4) A translation should read like a translation
5) A translation should reflect the style of the original
6) A translation should possess the style of the translator
7) It should read as a – Contemparary of the original
8) It should read as a Contemparary of the translator
9) It may add to or omit from the original
10)It may never add to or omit from the original
1!) A translation of verse should be in prose
12) A translation of verse should be in verse

ಈ ತತ್ವಗಳ ಮೂಲಕ ಅನುವಾದ ಕೃತಿಯ ಸಾಫಲ್ಯ ವೈಫಲ್ಯಗಳನ್ನು ಅಳೆಯಲು ಸಾಧ್ಯವಾಗುತ್ತವೆ.

ಅನುವಾದ ಕ್ರಿಯೆಯು ಬಹಳ ವ್ಯಾಪಕವಾದುದು ಒಬ್ಬರು ಮಾತಾಡಿದ್ದನ್ನು ಇನ್ನೊಬ್ಬರು ಆಲಿಸಿದಾಗ ಮಾತನಾಡುವವನ ಇಂಗಿತವನ್ನು ಆಲಿಸುವವನು ತನ್ನ ಶಕ್ತಿ ಸಾಮರ್ಥ್ಯ ಮತ್ತು ಸಂಸ್ಕಾರಗಳಿಗೆ ಅನುಗುಣವಾಗಿ ಅರ್ಥ ಮಾಡಿಕೊಳ್ಳುತ್ತಾನೆ. ಮಾತಿನ ಧ್ವನಿಯನ್ನು ಗುರುತಿಸದೆ ಹೋದಾಗ ಮಾತಿನ ಸ್ವಾರಸ್ಯವು ಆಲಿಸುವವನ ಅನುಭವಕ್ಕೆ ಬರುವುದೇ ಇಲ್ಲ ಮಾತಿನಲ್ಲಿ ಅಡಗಿರುವ ಹಾಸ್ಯ, ವಿನೋದ ಕೊಂಕು ಮುಂತಾದ ದ್ರವ್ಯಗಳನ್ನು ಅರ್ಥಮಾಡಿಕೊಳ್ಳುವ ಶಕ್ತಿ, ಸಾಮರ್ಥ್ಯಗಳು ಆಲಿಸುವವನಲ್ಲಿ ಇಲ್ಲದೆ ಹೋದಾಗ ಅನೇಕ ಆವಾಂತರಗಳು ಸಂಭವಿಸಬಹುದು. ಹೀಗೆ ಮೂಲ ಅನುವಾದ ಸಾಮಗ್ರಿ ನೀಡುವ ಅನುಭವ ದ್ರವ್ಯವನ್ನು ಗ್ರಹಿಸಬೇಕಾಗಿದೆ. ಆಲಿಸುವವನು ಸಮರ್ಥನಾದ ಅನುವಾದಕನಾಗಿದ್ದು ಮಾತನಾಡುವವನಿಗೆ ಸಹೃದಯನಾಗಿರಬೇಕಾಗುತ್ತದೆ. ಅಂದರೆ ಮಾಡನಾಡುವವನ ಅನುಭವ ದ್ರವ್ಯವನ್ನು ಗ್ರಹಿಸುವ ಶಕ್ತಿ ಸಾಮ್ರರ್ಥ್ಯಗಳು ಆಲಿಸುವವನಲ್ಲಿ ಇರಬೇಕು ಇದರೊಂದಿಗೆ ಸಂಸ್ಕಾರದ ಪರಿಜ್ಞಾನವೂ ಬೇಕಾಗುತ್ತದೆ.

ಅನುವಾದವು ಒಂದು ಕಲೆಯಾಗಿದ್ದು ಅದೊಂದು ಅಭಿವ್ಯಕ್ತಿ ಮಾಧ್ಯಮವಾಗಿದೆ. ಈ ಮಾಧ್ಯಮವು, ಚಿತ್ರಕಲೆ, ಸಂಗೀತ ಅಥ್ಥವಾ ಶಾಬ್ಧಿಕವಾದ

ಸಾಹಿತ್ಯವಾಗಿರಬಹುದು. ನಮ್ಮ ಅನುಭವ ದ್ರವ್ಯವನ್ನು ಈ ಯಾವುದೇ ಮಾಧ್ಯಮದಿಂದ ಅಭಿವ್ಯಕ್ತಿಸುತ್ತೇವೆ ಒಂದು ಮಾಧ್ಯಮದಿಂದ ಇನ್ನೊಂದು ಮಾಧ್ಯಮಕ್ಕೆ ರೂಪಾಂತರಗೊಂಡು ಅಭಿವ್ಯಕ್ತವಾಗುವ ಅನುಭವ ದ್ರವ್ಯವು ಅನುವಾದವೆನಿಸುತ್ತದೆ.

## • ಅನುವಾದ ಪ್ರಕಾರಗಳು :

ಮೂಲಭಾಷೆಯ ಒಂದು ಕೃತಿಯನ್ನು ಉದ್ದಿಷ್ಟ ಭಾಷೆಗೆ ತರುವಾಗ ಅನುವಾದಕನ ಉದ್ದೇಶ ಇಲ್ಲಿ ಮುಖ್ಯವಾಗಿರುತ್ತದೆ. ಅವನ ಉದ್ದೇಶ ಯಾರಿಗಾಗಿ ಈ ಕಾರ್ಯವನ್ನು ಮಾಡುತ್ತದೆಯೋ ಅದಕ್ಕೆ ತಕ್ಕಂತೆ ಅನುವಾದವು ರೂಪ ತಾಳುತ್ತದೆ. ಅನುವಾದಕನ ದೃಷ್ಟಿಯಲ್ಲಿ ಭಿನ್ನ ಓದುಗರಿರುತ್ತಾರೆ. ಸುಶಿಕ್ಷಿತರಾದ ಪ್ರೌಢ ಓದುಗರು ಅಥವಾ ಆಳವಾದ ಪಾಂಡಿತ್ಯ ಪಡೆದಿರುವವರು ಇಂಥ ಓದುಗರನ್ನವಲಂಬಿಸಿದ ಉದ್ದೇಶ ಭಿನ್ನತೆಗನುಸಾರವಾಗಿ, ಭಿನ್ನ ಭಿನ್ನ ವಿಧಗಳು ಅನುವಾದದಲ್ಲಿ ಉಂಟಾಗುತ್ತದೆ. ಹೀಗಾಗಿ ಇವುಗಳನ್ನು ರೂಪಾಂತರ (Adaptation) ಅನುವಾದ ಹಾಗೂ ಭಾವಾನುವಾದ (Paraphrasing) ಎಂದು ಹೇಳಲಾಗುತ್ತದೆ.

ಡಾ. ಕಾಶಿನಾಥ ಅಂಬಲಗೆಯವರು ಸುಶಿಕ್ಷಿತರಾದ ಪ್ರೌಢ ಓದುಗರನ್ನು ಗಮನದಲ್ಲಿರಿಸಿಕೊಂಡು ಪಂಜಾಬಿ ಕವನಗಳನ್ನು ಹಿಂದಿ ಭಾಷೆಯ ಮೂಲಕ ಕನ್ನಡ ಭಾಷೆಗೆ ರೂಪಾಂತರಗೊಳಿಸಿದ್ದಾರೆ. 'ರೂಪಾಂತರ' ವೆಂಬುದು ಹೆಸರೇ ಸೂಚಿಸುವಂತೆ ಒಂದು ಸಂಸ್ಕೃತಿಯ ವಿಶಿಷ್ಠ ಬೆಳವಣಿಗೆಯಾದ ಕಾವ್ಯದ ವಸ್ತುವನ್ನು ಅದು ಮತ್ತೊಂದು ಸಂಸ್ಸೃತಿಗೆ ಅಳವಡಿಸುವುದಾಗಿದೆ. ಅಂದರೆ ಇಲ್ಲಿ ಅಂಬಲಗೆಯವರು ಪಂಜಾಬಿ ಕವಿತೆಗಳಲ್ಲಿ ಮೂಡಿ ನಿಂತಿದ್ದ ಆ ಸಂಸ್ಕೃತಿಯ ರೀತಿ ನೀತಿಗಳನ್ನು ಕನ್ನಡಿಗರ ಸಂಸ್ಕೃತಿಯ ಅಂಶಗಳೊಡನೆ ಸಮೀಕರಿಸಿದ್ದಾರೆ. ಇಲ್ಲಿ ಶೀರ್ಷಿಕೆ ಬದಲಾಗಿದೆ, ವಸ್ತು ಹೆಚ್ಚು ಕಡಿಮೆ ಆಗಿರಬಹುದು, ಕಾಲ, ಪರಿಸರ, ಬದಲಾಗಿರಬಹುದು, ಕೆಲವು ಹೆಚ್ಚಿನ ಅಂಶಗಳು ಅನುವಾದದಲ್ಲಿ ಸೇರಿವೆ. ಮೂಲದಲ್ಲಿದ್ದ ಕೆಲವನ್ನು ತೆಗೆದು ಹಾಕಲಾಗಿದೆ. ಒಟ್ಟಾರೆ ಅನುವಾದದಲ್ಲಿ ಮೂಡಿದ ಅವರ ಪ್ರತಿಬೆ ಓದುಗರನ್ನು ಸೆಳೆಯುತ್ತದೆ.

ಕನ್ನಡ ಅನುವಾದ ಸಾಹಿತ್ಯಕ್ಕೆ ಸುಮಾರು ಎರಡುಸಾವಿರ ವರ್ಷಗಳ ಪ್ರಾಚೀನ ಇತಿಹಾಸವಿದೆ. ಕನ್ನಡ ಸಾಹಿತ್ಯದ ಪ್ರಾರಂಭ ಅನುವಾದದ ಮೂಲಕವೇ ಆಗಿದೆ. ಶ್ರೀ ವಿಜಯನ ಕವಿರಾಜ ಮಾರ್ಗ, ಶಿವಕೋಟ್ಯಾಚಾರ್ಯರ ವಡ್ಡಾರಾಧನೆ, ಪಂಪನ ಆದಿ ಪುರಾಣ, ವಿಕ್ರಮಾರ್ಜುನ ವಿಜಯ, ರನ್ನನ ಅಜಿತ ಪುರಾಣ, ಗಧಾಯುದ್ಧ, ಪೊನ್ನನ ಶಾಂತೀ ಪುರಾಣ, ನಾಗವರ್ಮನ ಕರ್ನಾಟಕ ಕಾದಂಬರಿ, ದುರ್ಗಸಿಂಹನ ಪಂಚತಂತ್ರ ಹಾಗೂ ಹಲವು ಆ ಕಾಲದ ಶಾಸ್ತ್ರ ಕೃತಿಗಳನ್ನು ಗಮನಿಸಿದರೆ, ಅವುಗಳಲ್ಲಿ ಎಷ್ಟೋ ಭಾಗಗಳು ರೂಪಾಂತರ ಅನುವಾದವೋ, ಭಾವಾನುವಾದವೋ ಆಗಿರುವಂತಿದೆ. ಈ ಕೃತಿಗಳಿಗೆಲ್ಲ ಮೂಲ ಆಕರ ಸಂಸ್ಕೃತದ ಕಾವ್ಯಗಳು ಇವು ಎಷ್ಟರ ಮಟ್ಟಿನ ಸ್ವತಂತ್ರ ಕಾವ್ಯಗಳೆಂಬುದನ್ನು ತೌಲನಾತ್ಮಕ ಅಧ್ಯಯನಗಳಿಂದ ನಾವು ಇನ್ನೂ ಗುರುತಿಸಬೇಕಾಗಿದೆ. ಈ ಕಾಲವನ್ನು ಅನುವಾದ ಸಾಹಿತ್ಯದ ಪ್ರಥಮ ಘಟ್ಟವೆನ್ನಬಹುದು.

ಬ್ರಿಟಿಷರು ಭಾರತಕ್ಕೆ ಬಂದು ನಮ್ಮನ್ನು ಆಳಿದ ಸಂದರ್ಭದಿಂದ ನಮ್ಮಲ್ಲಿ ಇಂಗ್ಲೀಷಾನುವಾದಗಳು ಆರಂಭಗೊಮಡವು ಇಲ್ಲಿ (Adaptation) ಹೊಂದಿಸಿಕೊಳ್ಳುವಿಕೆ ಹಾಗೂ (Paraphrasing) ಅನುವಾದ ಎರಡೂ ನಡೆದವು. ಶೆಕ್ಸಪೀಯರ್ ಮಹಾಕವಿಯ 'Marchant of Vahis' ನಾಟಕವನ್ನು ಕೆರೂರ ವಾಸುದೇವಾಚಾರ್ಯರು ಕನ್ನಡಕ್ಕೆ "ಸೂರತ್ ನಗರದ ಶ್ರೇಷ್ಠಿ" ಎಂದು ರೂಪಾಂತರಿಸಿದರು. ಸೊಪೊಕ್ಲಿಸ್ ಮಹಾಕವಿಯ ಗ್ರೀಕ್ ನಾಟಕ ಏಜಾಕ್ಸ (Aejaks) , ಬಿ.ಎಂ. ಶ್ರೀಯವರು ನಮ್ಮ ಸಂಸ್ಕೃತಿಗೆ ಅಳವಡಿಸುವ ಅಶ್ವತ್ಥಾಮನ ಎಂದು ರೂಪಾಂತರಿಸಿದರು. ಕುವೆಂಪು ಶೇಕ್ಸಪೀಯರನ Hamlet ನ್ನು 'ರಕ್ತಾಕ್ಷಿ 'ಯಾಗಿ Tempest ನ್ನು 'ಬಿರುಗಾಳಿ'ಯಾಗಿ ನಮ್ಮ ಸಂಸ್ಕ ತಿಯ ಆವರಣಕ್ಕೆ ತಂದುಕೊಟ್ಟಿದ್ದಾರೆ.

ಸಂಸ್ಕೃತದ ಅಭಿಜ್ಞಾನ ಶಾಕುಂತಲವನ್ನು ಉತ್ಕೃಷ್ಟವಾಗಿ ಕನ್ನಡಕ್ಕೆ ಅನುವಾದಿಸಿದ ದಿ. ಬಸವಪ್ಪ ಶಾಸ್ತ್ರಿಗಳು ಇಂಗ್ಲೀಷಿನಿಂದ ಕನ್ನಡಕ್ಕೆ ಅನುವಾದಿಸಿದ ಪ್ರಥಮರೂ ಎನಿಸಿದ್ದಾರೆ. ಅವರು ಮೊದಲು ಶೇಕ್ಸಪೀಯರನ 'Othello' ನಾಟಕವನ್ನು ಕನ್ನಡಕ್ಕೆ ಶೂರಸೇನ ಚರಿತೆ ಯನ್ನಾಗಿ ರೂಪಾಂತರಿಸಿದರು. ಇದೆ ಸಂದರ್ಭದಲ್ಲಿ ಎ.ಆರ್. ಕೃಷ್ಣಶಾಸ್ತ್ರಿಗಳು 'ವಚನ ಭಾರತ' ತೀ.ನಂ. ಶ್ರೀಯವರ 'ಮುದ್ರಾರಾಕ್ಷಸ', ಕುವೆಂಪುರವರ 'ಶ್ರೀ ರಾಮಾಯಣ ದರ್ಶನಂ' ದ ಕಾವ್ಯಾನುವಾದ, 'ವಚನ ಚಂದ್ರಿಕೆ' (ದೇ ಜವರೇಗೌಡ) ತುರಮತಿ ಅವರ 'ಕರ್ನಾಟಕ ಕಾದಂಬರಿ' ನಮ್ಮಲ್ಲಿ ಅನುವಾದಗೊಮಡಿರುವ ಉತ್ಕೃಷ್ಟ ಭಾವಾನುವಾದ ಕೃತಿಗಳೆನಿಸಿದೆ. Robert Browming ಕವಿಯ 'the Pied Piper of Hamelin' ಕವನದ ಅನುವಾದವನ್ನು ಕುವೆಂಪು ಅವರು 'ಬೊಮ್ಮ ಹಳ್ಳಿಯ ಕಿಂದರ ಜೋಗಿ' ಎಂದು ಬಾವಾನುವಾದ ಮಾಡಿರುವರು. ಕವಿ ಪ್ರತಿಭೆಯ ಕಾರ್ಯವು ಇಂತಹ ಅನುಭವಗಳಲ್ಲಿ ಸಾಕಷ್ಟಿದ್ದು ಈ ಕೃತಿಯು ಮೂಲಕ್ಕಿಂತಲೂ ಸೊಗಸಾಗಿ ಮೂಡಿಬಂದಿರುವದನ್ನು ಗುರುತಿಸಬಹುದಾಗಿದೆ.

ಇಂಥ ಭಾವಾನುವಾದಗಳು ಒಂದು ಭಾಷೆಯಿಂದ ಇನ್ನೊಂದು ಭಾಷೆಯಲ್ಲಿಯೇ ನಡೆಯಬೇಕೆಂದಿಲ್ಲ ಒಂದೇ ಭಾಷೆಯಲ್ಲಿಯೂ ಇಂಥ ಕಾರ್ಯಗಳು ನಡೆಯಬಹುದು ಆಗ ಅಂಥವುಗಳು ಭಾಷೆಯ ಅನುವಾದವಾಗದೇ ಮಾಧ್ಯಮದ

ಅನುವಾದಗಳೆನಿಸುತ್ತದೆ. ಜವರೇಗೌಡರ ವಚನ ಚಂದ್ರಿಕೆ, ಶ್ರೀ ರಾಮಯಣದರ್ಶನಂದ ಇಂಥ ಕಾವ್ಯಾನುವಾದವೆನಿಸುತ್ತದೆ. ಇಂಥ ಅನುವಾದಗಳಲ್ಲಿ ಮೂಲವಸ್ತುವಿನ ಆತ್ಮದ ಕಡೆಗೆ ವಿಶೇಷ ಲಕ್ಷ್ಯರುತ್ತದೆ. ಭಾವಾನುವಾದದಲ್ಲಿ ಶಬ್ದ, ವಾಕ್ಯಾಂಗ, ವಾಕ್ಯ ಮುಂತಾದವುಗಳ ಕಡೆಗೆ ಲಕ್ಷ್ಯವೀಯದೆ ಮೂಲ ಕೃತಿಯ ಭಾವ, ಅರ್ಥ ಅಥವಾ ವಿಚಾರಗಳ ಕಡೆಗೆ ವಿಶೇಷ ಲಕ್ಷ್ಯವನ್ನು ಕೊಡಲಾಗುವದು.[೫] ಈ ರೀತಿಯ ಅನುವಾದಗಳು ಅನುವಾದಕನ ಉದ್ದೇಶಕ್ಕನುಸರಿಸಿ ಭಿನ್ನವಾಗುತ್ತದೆ.

ಆದರೆ ಅನುವಾದಕನ ಉದ್ದೇಶಕ್ಕೆ ಆಸ್ಪದವೀಯದೆ ವಸ್ತುವಿನ ಭಿನ್ನತೆಯನ್ನು ಅನುಸರಿಸಿಯೂ ಅನುವಾದದಲ್ಲಿ ಬೇರೆ ಬೇರೆ ಪ್ರಕಾರಗಳುಂಟಾಗುತ್ತದೆ. ಇವುಗಳನ್ನು

೧) ವೈಜ್ಞಾನಿಕ ಸಾಹಿತ್ಯಾನುವಾದ

(Translation of Science Literatur)

೨) ಸಾಮಾಜಿಕ ಸಾಹಿತ್ಯಾನುವಾದ

(Translation of Social Science)

೩) ಸೃಜನ ಸಾಹಿತ್ಯಾನುವಾದ

(Translation of Aesthetic Literature)

ಎಂದು ವಿಭಾಗಿಸಬಹುದು.

೧) ವೈಜ್ಞಾನಿಕ ಸಾಹಿತ್ಯಾನುವಾದ : ಉಳಿದ ಪ್ರಕಾರಗಳಿಗಿಂತ ಇಲ್ಲಿ ಭಿನ್ನವಾದ ವಿಧಿ ವಿಧಾನಗಳು ತಂತ್ರ ಪದ್ಧತಿಗಳು ಇವೆ. ಈ ವರ್ಗದಲ್ಲಿ ಭೌತಶಾಸ್ತ್ರ, ರಸಾಯನ ಶಾಸ್ತ್ರ, ಗಣಿತಶಾಸ್ತ್ರ, ಜೀವಶಾಸ್ತ್ರ, ವೈದ್ಯಶಾಸ್ತ್ರ, ಇಂಜಿನೀಯರಿಂಗ್ ಮೊದಲಾದ ವಿಜ್ಞಾನ ಹಗೂ ತಾಂತ್ರಿಕ ಸಾಹಿತ್ಯದ ವಸ್ತುಗಳು ಬರುತ್ತವೆ. ಈ ಅನುವಾದ ಮಾಡುವವನಲ್ಲಿ ಎರಡೂ ಭಾಷೆಗಳ ಪ್ರಭುತ್ವವಲ್ಲದೆ ಆಯಾ ವಿಷಯಗಳ ಸಮರ್ಥಜ್ಞಾನವೂ ಅತ್ಯವಶ್ಯವಾಗಿರಬೇಕು ಇಲ್ಲಿ ಪರಿಭಾಷಿಕ ಪದಗಳ ಜ್ಞಾನ, ವಿಷಯವನ್ನು ವಿವೇಚಿಸುವ ಸಾಮರ್ಥ್ಯವೂ ಮುಖ್ಯವಾಗಿರುತ್ತದೆ.

೨) ಸಾಮಾಜಿಕ ಸಾಹಿತ್ಯಾನುವಾದ : ಸಾಮಾಜಿಕ ಸಾಹಿತ್ಯಾನುವಾದದ ವಿಧಿವಿಧಾನಗಳು ಹಾಗೂ ತಂತ್ರ ಪದ್ಧತಿಗಳ ವೈಜ್ಞಾನಿಕ ಸಾಹಿತ್ಯಾನುವಾದದಂತೆಯೇ ಇದ್ದು ವಿವಿಧ ಶಾಸ್ತ್ರಕ್ಕನುಗುಣವಾಗಿ ಭಿನ್ನವಾಗಿರುತ್ತದೆ. ಈ ಭಾಗದಲ್ಲಿ ಇತಿಹಾಸ, ಭೂಗೋಳ, ಅರ್ಥಶಾಸ್ತ್ರ, ಸಮಾಜಶಾಸ್ತ್ರ, ತತ್ವಶಾಸ್ತ್ರ, ರಾಜಕೀಯ ಶಾಸ್ತ್ರ ಮುಂತಾದವುಗಳು ಸೇರುತ್ತವೆ.

---

೫. ಜಿ.ಎಸ್. ಕುಳ್ಳಿ – ಅನುವಾದ ಕೃತಿ – ಪುಟ ಸಂ. ೧೩

ಇವು ಶಾಸ್ತ್ರ ವಿಷಯಗಳು ಆಗಿರುವದರಿಂದ ಇಲ್ಲಿಯೂ ಪಾರಿಭಾಷಿಕ ಪದಗಳ ಬಳಕೆಯ ಸಮಸ್ಯೆ ಉಂಟಾಗುತ್ತದೆ. ತತ್ವಶಾಸ್ತ್ರದಲ್ಲಿಯೂ ಈ ಸಮಸ್ಯೆ ಇನ್ನೂ ಗಾಢವಾಗಬಹುದು. ಸಂವಾದಿ ಪದಗಳ ಬಳಕೆಯ ದುಸ್ತರತೆ ಇಲ್ಲಿ ಕಾಣಬಹುದು. ಹೀಗಾಗಿ ಹೊಸ ಸಂವಾದಿ ಪದಗಳನ್ನು ಆಯಾ ಸಂಸ್ಕೃತಿಗನುಗುಣವಾಗಿ ಸೇರಿಸಿಕೊಳ್ಳಬೇಕಾಗುತ್ತದೆ.

೩) ಸೃಜನ ಸಾಹಿತ್ಯಾನುವಾದ : ಸೃಜನ ಸಾಹಿತ್ಯಾನುವಾದದಲ್ಲಿ ಕಾವ್ಯ, ನಾಟಕ, ಕಥೆ, ಕಾದಂಬರಿ, ಪ್ರಬಂಧ ಇತ್ಯಾದಿಗಳು ಅಡಕವಾಗುತ್ತವೆ. ಈ ಎಲ್ಲ ಸೃಜನಶೀಲ ಸಾಹಿತ್ಯ ಪ್ರಕಾರಗಳಲ್ಲಿ ಒಂದೊಂದು ಪ್ರಕಾರಕ್ಕೂ ಅನುವಾದದ ವಿಧಾನ ಭಿನ್ನವಾಗಿರುತ್ತದೆ ಸೃಜನ ಸಾಹಿತ್ಯಾನುವಾದ ಒಂದು ರೀತಿ ಕಠಿಣವಾದದೆಂದನ್ನಬಹುದು.

ಡಾ. ಕಾಶೀನಾಥ ಅಂಬಲಗೆಯವರು ನಾಟಕ, ಕಥೆ, ಕಾದಂಬರಿ ಕಾವ್ಯಗಳೆಲ್ಲ ರೂಪಾಂತರಿಸಿರುವುದನ್ನು ನಾವಿಲ್ಲಿ ಕಾಣಬಹುದಾಗಿದೆ. ಹಾಶ್ಮಿಯವರ ಐದು ಮಕ್ಕಳ ನಾಟಕಗಳನ್ನು ಹಿಂದೀ ಭಾಷೆಯಿಂದ ಕನ್ನಡ ಭಾಷೆಗೆ ಅನುವಾದಿಸಿದ್ದಾರೆ – ಅವುಗಳೆಂದರೆ,

(೧) ಸತ್ಯಜೀತ ರಾಯ ಅವರ – ಗೋಪಿಗಾಯಾನ, ಭಾಘಾಬಾಯಿನ ಸಿನಿಮಾದ ರೂಪಾಂತರವಾದ ಇದನ್ನು ಇವರು, 'ಗೋಪಿ ಹಾಡುಗಾರ', 'ಭಾಘಾ ಡೋಲಗಾರ' ಎಂದು (೨) 'ಬಲುವರ್ಣಮಯ ಈ ಲೋಕವಯ್ಯಾ' (೩) 'ಶಿಲ್ಪಿ' (೪) ಚೆಕಾಫ್ ಅವರ ಮೂಲ ನಾಟಕದ ರೂಪಾಂತರ – 'ಬಣ್ಣ ಬದಲಾಯಿಸುವವರು' ಹಾಗೂ (೫) 'ರಾಜನ ಹುಡುಗಾಟ' ಎಂಬವುಗಳು ಅವರ ಅನುವಾದಗಳು

ನಮ್ಮ ದೇಶದಲ್ಲಿ ಮನುಷ್ಯರಾಗುವದೇ ಕಷ್ಟದ ಕೆಲಸ. ಇಲ್ಲಿ ದೇವರಾಗುವದು ಅಥವಾ ಭಿಕ್ಷುಕನಾಗುವದು ಬಹಳ ಸರಳ ಎನ್ನುವ ಅನುವಾದಕರು ಮಕ್ಕಳನ್ನು ನಿಜವಾದ ಮನುಷ್ಯರನ್ನಾಗಿ ಮಾಡುವ ನಾಟಕಗಳು ಇವು ಎನ್ನುತ್ತಾರೆ.

ಇಂದಿನ ಮಕ್ಕಳಲ್ಲಿ ಹಲವು ಭಾವನೆಗಳನ್ನು ಒಟ್ಟು ಗೂಡಿಸಿ ಸಾಮಾಜಿಕ ಭಾವನೆಯನ್ನು ಸೃಷ್ಟಿಸಲು ಸಾಧ್ಯ. ಇದು ಸಮಾಜಕ್ಕೆ ಆರೋಗ್ಯಕರವಾದ ಸಂಗತಿ ಎಂಬುದನ್ನು ಮಕ್ಕಳು ಅರಿತಿವೆ. ಆಗ ಮಕ್ಕಳೇ ಒಂದು ಹೊಸ ಶಕ್ತಿಯಾಗಿ ಏನೆಲ್ಲ ಸೃಷ್ಟಿಸಬಲ್ಲವು ಇದನ್ನು ನಾವು ಅವರಿಂದ ಕಲಿಯಬೇಕು.

---

೬) ಕಾಶಿನಾಥ ಅಂಬಲಗೆ ಹಾಶ್ಮಿಯವರ ಮಕ್ಕಳ ನಾಟಕಗಳು – ಅನುವಾದಕನ ಮಾತು ಪುಟ ಸಂ. VI - ೨೦೦೨

ಇಂದಿನ ಆಳುವವರ ವಿಚಾರಗಲು ತಮ್ಮ ಹಿತಾಸಕ್ತಿಗೆ ತಕ್ಕಂತಯೇ ಇರುತ್ತವೆ. ಅವು ಜನಸಾಮಾನ್ಯರ ಹಿತ ಕಾಪಾಡುವುದಿಲ್ಲ ಇದು ನಮಗೆ ಗೊತ್ತಾಗಬೇಕು. ಆಳುವವರ ವಿಚಾರಗಳು, ಕಾಪಾಡುವ ಮುಂದುವರಿಸಿಕೊಂಡು ಹೋಗುವ ಏಜನ್ಸಿಗಳೂ ನಮಗೆ ಗೊತ್ತಾಗಬೇಕು ಇಂಥವರನ್ನು ಒಲೈಸುವವರು ಜನರ ಮುಒದೆ ಬರಬೇಕು. ನಿಜವಾದ ಜನಸತ್ತೆಯಲ್ಲಿಯೇ ಜನ ಹಿತ ಅಡಗಿದೆ. ಜನಾಧಿಕಾರಕ್ಕಾಗಿ ಹುಡುಕಾಟ ನಡೆಸಬೇಕಾಗಿದೆ. ಅಂಥ ನಾಯಕ ನಮ್ಮಲ್ಲಿದ್ದು ಆತನು ಹೊರಬರಬೇಕು. ಕಲೆಯು ಯಾರಪ್ಪನ ಆಸ್ತಿ ಅಲ್ಲ ಅದು ಎಲ್ಲರ ಸೊತ್ತು ಅದನ್ನು ಎಲ್ಲ ರೀತಿಯಿಂದಲೂ ಗೌರವಿಸಬೇಕು. ಹಾಗಾದಾಗ ಜನಕಲೆ ನಾಡಿನ ಕಲೆಯಾಗುತ್ತದೆ. ಎಂಬುದನ್ನು ಕುರಿತು ಈ ಐದು ನಾಟಕಗಳು ತಿಳಿಸುವದನ್ನು ನಾವಿಲ್ಲಿ ಅರಿಯ ಬಹುದಾಗಿದೆ. ಇಂಥ ನಾಟಕಗಳು ಕನ್ನಡದ ಮಕ್ಕಳ ನಾಟಕ ಲೋಕವನ್ನು ಶ್ರೀಮಂತಗೊಳಿಸಲಿ ಎಂಬ ಕವಿಯ ಆಶೆಯಿಂದ ಅವು ಅನುವಾದಗೊಂಡಿವೆ ಎಂಬುದು ಇಲ್ಲಿ ಮುಖ್ಯವಾದ ಸಂಗತಿಯಾಗಿದೆ.

ಡಾ. ರಾಮಧಾರಿಸಿಂಹ ದಿವಾಕರ ಹಾಗೂ ಕೇಶವ ಬಲರಾಮ ಅವರ ಕಥೆಗಳು ಹಿಂದಿ ಭಾಷೆಯಿಂದ ಕನ್ನಡಕ್ಕೆ ಅನುವಾದಿಸಿದ್ದಾರೆ. ತಮ್ಮ ಕನ್ನಡ ಕವಿತೆಗಳು ಬೇರೆ ಬೇರೆ ಭಾಷೆಗಳಿಗೆ ಅನುವಾದಿಸಲಾಗಿದ್ದು, ಅವರ ಅನುವಾದದ ಗಟ್ಟಿತನವನ್ನು ಈ ಕೃತಿಗಳಲ್ಲಿ ಸಾಬೀತುಗೊಂಡಿವೆ.

ಕನ್ನಡ ಭಾಷೆಯಿಂದ ಹಿಂದಿಗೆ –

೧) ಲಂಕೇಶರ ನಾಟಕ 'ಕ್ರಾಂತಿ ಬಂತು ಕ್ರಾಂತಿ'

೨) ಸಾರಾ ಅಬೂಬಕರ ಅವರ ಕಾದಂಬರಿ 'ಚಂದ್ರಗಿರಿ ನದಿಯ ತೀರದಲ್ಲಿ'

ಹಲವಾರು ನಾಟಕ ರೂಪಕಗಳನ್ನು ಆಕಾಶವಾಣಿ ರಾಷ್ಟ್ರೀಯ ಸ್ಪರ್ಧೆಗಾಗಿ ಅನುವಾದ ಮಾಡಿ ಕೊಟ್ಟಿದ್ದಾರೆ. ಇಲ್ಲೆಲ್ಲ ಈ ಲೇಖಕರು ಕನ್ನಡ ಹಗೂ ಹಿಂದಿ ಭಾಷೆಗಳೆರಡರಲ್ಲೂ ಬರೆಯುತ್ತ ಭಾರತೀಯ ಲೇಖಕರಾಗಿರುವುದು ಎದ್ದು ಕಾಣುತ್ತದೆ. ಭಾರತೀಯ ಸಾಹಿತ್ಯವನ್ನು ಪರಿಗಣಿಸುವ ಸಂದರ್ಭದಲ್ಲಿ ಡಾ. ಅಂಬಲಗೆಯವರು ಈ ಅನುವಾದದ ಮೂಲಕ ತುಂಬಾ ಮುಖ್ಯರಾಗುತ್ತಾರೆ. ಅನುವಾದಕನ ಪ್ರತಿಭೆ, ವ್ಯಕ್ತಿತ್ವ ಹಾಗೂ ಸೃಜನಾತ್ಮಕತೆಯನ್ನು ಗುರುತಿಸಲು ಅವರ ಮೂರು ಕಾವ್ಯಾನುವಾದಗಳನ್ನಿಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ.

# ಅಧ್ಯಾಯ : ೩ : ೧ ಕೋಗಿಲೆ ಅಳುತಿದೆ

ಸಮಕಾಲೀನ ೨೦೦ ಪಂಜಾಬಿ ಮಿನಿ ಕವಿತೆಗಳನ್ನೊಳಗೊಂಡಿರುವ ಈ ಕಾವ್ಯಾನುವಾದ ಸಂಕಲನವು ೧೯೯೩ರಲ್ಲಿ ಪ್ರಕಟವಾಗಿದೆ. ಮೂಲ ಪಂಜಾಬಿ ಭಾಷೆಯಿಂದ ಈ ಮಿನಿ ಕವಿತೆಗಳನ್ನು ರಾಮ ಸಿಂಹ ಚಾಹಲ ಅವರು ಹಿಂದಿಗೆ ಅನುವಾದಿಸಿದ್ದರು. ಆ ಹಿಂದೀ ಅನುವಾದವನ್ನಿಟ್ಟುಕೊಂಡು ಡಾ. ಕಾಶಿನಾಥ ಅಂಬಲಗೆಯವರು ಅವುಗಳನ್ನು ಕನ್ನಡಕ್ಕೆ ತಂದು ಕೊಟ್ಟಿದ್ದಾರೆ.

೧೯೮೦ ರಿಂದ ೧೯೯೦ರ ಸಮಯ ಪಂಜಾಬಿನ ಸಾವುನೋವುಗಳ ಘಟನಾವಳಿಗಳನ್ನು ಕೇಳುವ ಸಮಯವಾಗಿತ್ತು ಇದು ಭಾರತ ದೇಶವನ್ನಷ್ಟೇ ಅಲ್ಲ. ಇಡೀ ವಿಶ್ವವನ್ನೇ ತನ್ನ ಕಡೆಗೆ ಸೆಳೆದಿತ್ತು. ಅಲ್ಲಿನ ಜನರ ಭತಿಕ ಹಾಗೂ ಮಾನಸಿಕ ಹಿಂಸೆಗಳ ಬಗ್ಗೆ ಕಂಡು ಕೇಳಿ ಓದಿ ಏನೂ ಮಾಡಲಾರದ ಸ್ಥಿತಿಗೆ ಭಾರತೀಯರ ಮನಸ್ಸುಗಳು ತಲುಪಿದ್ದವು. ಮನುಷ್ಯನ ಬದುಕಿಗೆ ಕವಡೆಯ ಕಿಮ್ಮತ್ತು ಇರಲಾರದ ಘಟನೆಗಳು ದಿನಬೆಳಗಾದರೆ ಅಲ್ಲ ನಡೆಯುತ್ತಿದ್ದವು. ಇಂಥಹುಗಳನ್ನು ದಿನಾಲು ಪತ್ರಿಕೆಗಳಲ್ಲಿ ಓದುವ ಅನುವಾರ್ಯತೆ ಈ ದಶಕದಲ್ಲಿ ಭಾರತೀಯರಿಗೆ ಬಂದೊದಗಿತ್ತು. ಮಾನವೀಚಿಯುತೆಯ ಆರಾಧಕರು ಹಾಗೂ ಗುರು ಗ್ರಂಥ ಸಾಹೇಬದ ಪ್ರೇರಕ ಶಕ್ತಿಯನ್ನು ಹೊಂದಿದ್ದ ಪಂಜಾಬಿನ ಪ್ರಜೆ ಇಂಥ ಘಟನೆಯಿಂದ ಕಂಗಾಲಾಗಿದ್ದರು. ಪಂಜಾಬಿನಲ್ಲಿ ಈ ಆತಂಕವಾದ ಸೃಷ್ಟಿಸಿದ ಭಯ–ಭೀತಿ ಸಾವು–ನೋವುಗಳ ಪ್ರಭಾವ ಅಲ್ಲಿನ ಪ್ರಜ್ಞಾವಂತ ಸಮಾಜದ ಮೇಲೆ ದಟ್ಟವಾದ ಕಾರ್ಮೋಡವನ್ನು ಬೀರಿತ್ತು. ಇದರ ಪರಿಣಾಮವಾಗಿ ಅಲ್ಲಿನ ಸಂವೇದನಾಶೀಲ ಕವಿಗಳು ಮಾನವೀಯತೆಯಿಂದ ಆ ಸಮಾಜದ ಮೇಲಾಗಿರುವ ನೋವನ್ನು ನಿವಾರಿಸುವ ಪ್ರೇರಕ ಶಕ್ತಿಯಾಗಿ ಕಾರ್ಯಮಾಡಿದರು. ಆ ಹಿನ್ನಲೆಯಲ್ಲಿ ಮೂಡಿ ಬಂದ ಕವಿತೆಗಳೇ ಪಂಜಾಬಿನ ೨೦೦ ಮಿನಿಕವಿತೆಗಳು.

ಪಂಜಾಬಿನಲ್ಲಿ ನಡೆದ ಈ ಘೋರ ಘಟನೆಗಳ ಯಥಾರ್ಥ ಸ್ಥಿತಿಯನ್ನು ಪ್ರತಿಬಿಂಬಿಸುವ ಇಲ್ಲಿಯ ಪುಟ್ಟ ಕವನಗಳ ಬಗ್ಗೆ ದೀಪಾವಳಿ ವಿಶೇಷಾಂಕದಲ್ಲಿ ಮೂಡಿ ಬಂದ ಒಂದು ಸಣ್ಣ ಲೇಖನದಲ್ಲಿಯ ಒಂದು ಮಿನಿ ಕವಿತೆ ಓದಿದ ಡಾ. ಕಾಶಿನಾಥರು ಅಂತಹ ಕವಿತೆಗಳನ್ನು ಕನ್ನಡ ಕಾವ್ಯಾಸಕ್ತರಿಗೆ ಒದಗಿಸಬೇಕೆಂದು ಆಲೋಚಿಸಿ ಕಾರ್ಯತತ್ಪರರಾದರು. ಹಾಗೆಯೇ ಚಾಹಲರ ನಾಲ್ಕೈದು ಚಿಕ್ಕ ಕವಿತೆಗಳನ್ನು ಅನುವಾದಿಸಿ ಕನ್ನಡ ಪತ್ರಿಕೆಯೊಂದರಲ್ಲಿ ಪ್ರಕಟಿಸಿ, ಅದರ ಪ್ರತಿಗಳನ್ನು ಚಾಹಲರಿಗೆ ಕಳುಹಿಸಿ ಆ ದಶಕದಲ್ಲಿ ನಡೆದ ಬೆಳವಣಿಗೆ ಬಗ್ಗೆ ಪ್ರಾತಿನಿಧಿಕ ಕವಿಗಳ ೨೦೦ ಮಿನಿ ಕವಿತೆಗಳನ್ನು ಪಂಜಾಬಿಯಿಂದ – ಹಿಂದಿಗೆ ಅನುವಾದಿಸಿ ಕಳುಹಿಸಲು ಕೇಳಿದರು. ಆ ನಿಮಿತ್ಯವಾಗಿ ಬಂದ ೩೪ ಕವಿಗಳ ಸುಮಾರು ೨೧೦ ಮಿನಿ ಕವಿತೆಗಳಲ್ಲಿ ೨೦೦ರನ್ನು ಆಯ್ಕೆ ಮಾಡಿಕೊಂಡು ಅನುವಾದಿಸಿದರು. ಆಲೋಚನಾ ಪರವಾಗಿರುವ ಚಿತ್ತಾಕರ್ಷಕವಾಗಿರುವ

ಪಂಜಾಬಿ ನೋವಿನ ಈ ಮಿನಿ ಕವಿತೆಗಳ ಅನುವಾದದ ಫಲವೇ ಕೋಗಿಲೆ ಅಳುತಿದೆ ಎಂಬ ಸಂಕಲನವಾಗಿ ರೂಪುಗೊಂಡಿತು.

ಪಂಜಾಬಿನ ಮೂಲ ಲೇಖಕರಾಗಿರುವ ಪಾಶರ ೧೮, ಸುರಜೀತ ಪಾತ್ರರ ೧೦, ಮಿಂದರ ೯, ಸತಂದಿರ ಸಿಂ ನೂರ ೫, ಹರಬಜನ ಹಲವರ್ಹಿಯ ೨, ಸರೋದ ಸುದೀಪರ ೧೦, ಸಂತೋಖ ಸಿಂಹ ಧೀರರ ೨, ರಾಮಿಸಿಂಹ ಚಾಹಲರ ೨೦, ದೇವರ ೬, ಸ್ವರ್ಣಜೀತ ಸವಿ ೧೧, ಬಲಬೀರ ಪರವಾನಾರ ೪, ಧರ್ಮಕಮ್ಮೆ ಆಣಾರ ೩, ದರ್ಶನ ದರವೇಶರ ೨, ಅಮರಜೀತ ಕೌಂಕೆರ ೪, ಸ್ವರಾಜವೀರನ ೩, ರಣಜೀತ ಮಾಧೋಪುರಿಯ ೫, ಇಕಬಾಲ ದೀಪರ ೫, ಸೋಹನ ಢಂಡರ ೩, ಭೂಪೇಂದ್ರರ ೪, ಶ್ರೀಮತಿ ರಾಜೇಂದ್ರ ಕೌರರ ೧೦, ವಿಶಾಲರ ೨, ಗುರುಪ್ರೀತ್ ೪, ದೇವನೀತರ ೪, ಪರಂಜಿತ ಸೋಹಲರ ೩, ಅವತಾರ ಜೀತರ ೯, ಜಸವಂತ ಜಫರರ ೫, ಪರವೇಶರ ೪, ಹರಮೀತ ವಿದ್ಯಾರ್ಥಿ ೪, ಶ್ರೀಮತಿ ವನೀತಾರ ೬, ಅಜಿತ ರಾಹಿಯ ೪, ಶಶಿ ಸಮುದ್ರಾರ ೪, ಸುಖೀಂದ್ರರ ೩, ರಮೇಶ ಕುಮಾರರ ೨, ಹಾಗೂ ಜಗಜೀತಗಿಲರ ೩ ಮಿನಿ ಕವಿತೆಗಳನ್ನು ಈ ''ಕೋಗೆಲೆ ಅಳುತಿದೆ'' ಕವನ ಸಂಕಲನದಲ್ಲಿ ಅನುವಾದಿಸಲಾಗಿದೆ.

ಡಾ. ಅಂಬಲಗಿಯವರು ಅನುವಾದಕ್ಕಾಗಿ ಪಂಜಾಬಿನ ಹಲವು ಲೇಖಕರ ಮಿನಿ ಕವಿತೆಗಳನ್ನು ಆರಿಸಿಕೊಂಡಿರುವುದರಿಂದ ಅವು ಬೇರೆ ಬೇರೆ ಕಾವ್ಯ ತಂತ್ರ, ಶೈಲಿ, ವೈವಿಧ್ಯತೆ ಹಾಗೂ ಅಭಿವ್ಯಕ್ತಿ ಕ್ರಮಗಳಲ್ಲಿ ವಿಭಿನ್ನವಾಗಿ ಕಾಣಿಸುತ್ತವೆ.[೨] ಇವು ಒಂದು ರೀತಿಯಲ್ಲಿ ಪಂಜಾಬಿ ಹಗೂ ಹಿಂದೀ ಸಾಹಿತ್ಯದಲ್ಲಿರುವ ಮಿನಿ ಕವಿತೆಯ ರಚನಾ ವೈವಿಧ್ಯತೆಯನ್ನು ಕನ್ನಡಿಗರಿಗೆ ಪರಿಚಯಿಸಿದಂತಾಗುತ್ತದೆಂಬುದು ಅನುವಾದಕನ ಮೂಲ ಆಶಯವಾಗಿರುವುದು ಇಲ್ಲಿ ಎದ್ದು ಕಾಣುತ್ತದೆ.

ಡಾ. ಕಾಶಿನಾಥ ಅಂಬಲಗಿಯವರು ಪ್ರಜ್ಞಾವಂತ ಕವಿ ಎಂಬುದನ್ನು ಇಲ್ಲಿ ಅನುವಾದಕ್ಕೆ ಆರಿಸಿಕೊಂಡಿರುವ ಕವಿತೆಗಳಿಂದಲೇ ಎದ್ದು ಕಾಣುತ್ತಾರೆ. ಅವರು ಇಲ್ಲಿ ಅನುವಾದಕ್ಕಾಗಿ ಆಯ್ದುಕೊಂಡಿರುವ ಕವನಗಳ ಸಂದರ್ಭಗಳು ಅವರ ಆಯ್ಕೆ ಪ್ರಜ್ಞೆಗೆ ಸಾಕ್ಷಿಯಾಗುತ್ತದೆ. ಒಬ್ಬ ಪ್ರಜ್ಞಾವಂತ ಅನುವಾದಕ ಸಲ್ಲಿಸಬೇಕಾದ ಇಲ್ಲ ಲಕ್ಷಣಗಳು ಡಾ. ಅಂಬಲಗಿಯವರಲ್ಲಿರುವುದನ್ನು ನಾವಿಲ್ಲಿ ಗುರುತಿಸಬಹುದು. ಅನುವಾದಕನ ಕವಿತೆಗಳ ಆಯ್ಕೆಯು ಇಲ್ಲಿ ಸಮಕಾಲೀನ ವಸ್ತು ವಿಷಯವನ್ನೊಳಗೊಂಡಿದ್ದು, ಕಾವ್ಯ ಶೈಲಿಯೂ ಕೂಡಾ ಆಧುನಿಕವಾಗಿರುವಂತಹದ್ದು. ಈ ದೃಷ್ಟಿಯಲ್ಲಿ ಗಮನ ಸೆಳೆಯುವ ಅಂಬಲಗೆಯವರ ಅನುವಾದಗಳಲ್ಲಿಯ – ಪಂಜಾಬಿ ಸಾವು, ಆಂದೋಲನ, ಬದುಕು ಯುದ್ಧ, ಕರ್ಫ್ಯೂ, ಪಾರ್ಲಿಮೆಂಟ ಪ್ರಜಾಪ್ರಭುತ್ವ, ಹೆಣ್ಣು, ತಾಯಿ, ಸ್ವಾತಂತ್ರ್ಯ ಮಕ್ಕಳು,

---

೨. ವಿವರಗಳಿಗಾಗಿ ನೋಡಿ – ಕೋಗಿಲೆ ಅಳಿತಿದೆ – ೧೯೯೩ರ ಪರಿವಿಡಿ

ಕತ್ತಲು ಬೆಳಕು, ಸೆಕ್ಯೂಲರ್ ಬಂದೂಕು ಮೊದಲಾದ ವಾಸ್ತವಿಕ ಬದುಕಿನ ಆಗುಹೋಗುಗಳಲ್ಲಿ ಬೇರು ಬಿಟ್ಟು ಅಸ್ತವ್ಯಸ್ತಗೊಂಡಿರುವ ಸಂಗತಿಗಳೇ ಪ್ರಧಾನವಾಗಿದ್ದು, ಅದು ಪ್ರಸ್ತುತ ಪಂಜಾಬಿನ ಚಿತ್ರವನ್ನು ಕ್ಣಣ್ಮುಂದೆ ನಿಲ್ಲಿಸುತ್ತದೆ.

ಮೂಲ ಲೇಖಕರ ಕವಿತೆಗಳಲ್ಲಿ ತುಂಬಿ ತುಳುಕಾಡುತ್ತಿರುವ ಮಾನವನ ಎಲ್ಲ ಮಾನಸಿಕ ಪ್ರವೃತ್ತಿಗಳ ಆಗು ಹೋಗುಗಳನ್ನು ಅನುವಾದಕರು ತುಂಬಾ ಸೂಕ್ಷ್ಮವಾಗಿ ಗಮನಿಸಿರುವುದು ಎಲ್ಲೆಲ್ಲೂ ಕಾಣಸಿಗುತ್ತಿದ್ದು ಇವರು ಅನುವಾದಕ್ಕೆ ಉಪಯೋಗಿಸಿಕೊಂಡಿರುವ ಎಷ್ಟೋ ಶಬ್ದಗಳು ಮನೋಜ್ಞವಾಗುತ್ತದೆ. ಪಂಜಾಬ ಕುರಿತೆ ಅವರ ಕೆಲವು ಅನುವಾದಗಳನ್ನಿಲ್ಲಿ ಪರಿಶೀಲಿಸಿ ನೋಡಬಹುದು. ಸ್ವರಚಿತ ಅಂದಿನ ಪಂಜಾಬ ಕುರಿತ ಕವನಗಳು __

ನಾನು ಎರಡು ಹೆಜ್ಜೆಮಾತ್ರ ನಡೆದಿರುತ್ತೇನೆ
ಗಡಿ ಪ್ರದೇಶ ಬಂದೇಬಿಡುತ್ತದೆ.
ನಾನು ನೆಟ್ಟಗಿಡಗಳ ನೆರಳುಗಳು
ಎಷ್ಟೊಂದು ಚಿಕ್ಕದಾಗಿ ಬಿಟ್ಟಿವೆ.[೩]?!
ಶೋಕಾಚರಣೆ,
ಹಿಂಸೆ, ಭಯ
ಅಸಹಾಯಕತೆ ಹಾಗೂ ಅಪರಾಧ
ಇವು ಇಂದಿನ ನನ್ನ[೪]
ಐದು ನದಿಗಳ ಹಸರು ಹಾಗೇಯೇ
ಪ್ರತೀ ಸಾವೂ ನಮ್ಮ ಕಣ್ಣೀರೇ
ನಮ್ಮ ಕಣ್ಣಿನಿಂದ ಬರುವುದಿಲ್ಲ
ಕೆಲವು ಸಲ
ನಮ್ಮ ಹಿರಿಯರೂ ಕೂಡ
ನಮ್ಮ ಕಣ್ಣುಗಳ ಮೂಲಕವೇ ಅಳುತ್ತಾರೆ.[೫]

ಇಲ್ಲಿ ಎಲ್ಲ ನೋವು ಆಕ್ರೋಶ, ಬಂಡಾಯಗಳನ್ನು ಅವುಗಳ ನೈಸರ್ಗಿಕ ಕಾಣಿಕೆಗಳಿಂದ ಮುಕ್ತಗೊಳಿಸಿ ಕಾವ್ಯವಾಗಿಸುವಲ್ಲಿ ಮೂಲ ಕವಿಗಲು ಹೇಗೆ ತಮ್ಮ ಪ್ರತಿಭೆಯನ್ನು ಮೆರೆದಿದ್ದರೋ ಹಾಗೆಯೇ ಅನುವಾದಕರೂ ಸಹ ಅದನ್ನು ಅನುವಾದದಲ್ಲಿ

---

೩. ಡಾ. ಕಾಶಿನಾಥ ಅಂಬಲಗಿ – ಕೋಗಿಲೆ ಅಳುತಿದೆ – ೧೯೯೩ ಪುಟ ಸಂ. ೧೦

೪–೫. ಡಾ. ಕಾಶಿನಾಥ ಅಂಬಲಗಿ – ಕೋಗಿಲೆ ಅಳುತಿದೆ – ೧೯೯೩ ಪುಟ ಸಂ. ೧೬

ಉಳಿಸಿಕೊಂಡು ಬಂದಿರುವುದನ್ನು ಗುರುತಿಸಬಹುದು. ಶೋಕ, ಹಿಂಸೆ, ಭಯ ಅಸಹಾಯಕತೆ ಹಾಗೂ ಅಪರಾಧ ತಾಂಡವವಾಡುತ್ತಿರುವ ಪಂಜಾಬಿನ ಚಿತ್ರವನ್ನು ಈ ಮಿನಿಕವಿತೆಗಳು ಸಮರ್ಥವಾಗಿ ಧ್ವನಿಸುತ್ತವೆ.

ನನ್ನ ಹೆಗಲ ಮೇಲೊಂದು ಕಂಬಳಿ ಇತ್ತು
ಕೈಯಲ್ಲೊಂದು ಕೊಳಲು ಇತ್ತು
ನಾನು ಮಲಗಿರಲೂ ಇಲ್ಲ
ಎಲ್ಲೂ ಹೊರಗೆ ಹೋಗಿರಲಿಲ್ಲ
ನನ್ನ ಹೆಗಲ ಮೇಲೆ ಹೆಣವನ್ನಿಟ್ಟವರಾರು?[೭]
ಕೈಯಲ್ಲಿ ಬಂದೂಕು ಕೊಟ್ಟವರಾರು?

ಎಂಬುದನ್ನು ಮಿಂದರ ಮಿನಿ ಕವಿತೆಯ ಸುಂದರವಾದ ಅನುವಾದ ಇಲ್ಲಿಯ ಸರಳ ಶಬ್ದಗಳ ಪ್ರಯೋಗ ರೀತಿ ಸೃಜನ ಮನದ ಕವಿಯೊಬ್ಬರ ಕೃತಿಯಿದು ಎನಿಸುವಂತೆ, ಅನುವಾದಗೊಂಡಿದೆ. ಹೀಗೆಯೇ ಡಾ. ಕಾಶಿನಾಥ ಅಂಬಲಗಿಯವರು ಮಿಂದರ ಹೇಳುವ ನಾನಂತೂ ಈ ಭೂಮಿಯನ್ನು ಗುರುವಾಣಿ ಹಾಗೂ ಗೀತೆಯ ಧರ್ಮವನ್ನೇ ಬಿತ್ತಿದ್ದೆ ಆದರೆ ಇಲ್ಲಿ ಬೆಂಕಿಯ ಬೀಜ ಹಾಗೂ ತಿರಸ್ಕಾರದ ಬೆಳೆ ಹೇಗೆ ಬೆಳೆಯಿತೆಂದು ಪ್ರಶ್ನಿಸುವಷ್ಟು ಪಂಜಾಬ ಹದಗೆಟ್ಟಿತ್ತು. ಸ್ವಂತ ಪಂಜಾಬದ ಪುಣ್ಯಭೂಮಿ ಗುರುತಿಸಲಾರದಷ್ಟು ಬದಲಾಗಿತ್ತು ಎಂಬುದನ್ನು ಅಂಬಲಗಿಯವರು ಸೊಗಸಾಗಿ ಅನುವಾದಿಸಿರುವರು. ಅದು 'ನನ್ನನ್ನು ನೋಡಬೇಡ' ಎಂಬ ಮಿನಿ ಕವಿತೆಯಲ್ಲಿ

ನನ್ನ ಮುಖವನ್ನು
ನಾನೇ ಗುರುತಿಸಲಾರದಾಗಿದ್ದೇನೆ
ನನ್ನ ಕೂದಲು ಕೆಲಸಲ
ಉದ್ದವಾಗುತ್ತವೆ, ಕೆಲ ಸಲ
ಗಿಡ್ಡವಾಗುತ್ತವೆ!
ನನಗೆ ರಕ್ತದ ವಾಂತಿಯಾಗುತ್ತಿದೆ
ಇತ್ತೀಚೆಗೆ ಕೆಲವರ್ಷಗಳಿಂದ
ನಾನು ಬಾಗಿಲುಗಳ ಹೊರಗೆ
ಮನುಷ್ಯರ ತಲೆ ಬುರುಡೆ ನೇತು ಹಾಕುತ್ತಿದ್ದೇನೆ
ನಾನು ಅಳುವುದು ನಗುವುದು
ಹಾಗೂ ಹಾಡುವುದು ಮರೆತ್ತಿದ್ದೇನೆ

---

೭ ಡಾ. ಕಾಶಿನಾಥ ಅಂಬಲಗಿ – ಕೋಗಿಲೆ ಅಳುತಿದೆ – ೯೩ – ಪುಟ ಸಂ. ೧೬

ನೀನು ನನ್ನೆಡೆಗೆ ನೋಡಬೇಡ
'ಪ್ಲೀಜ' ನಾನು ಪಂಜಾಬಿನ
ಮಣ್ಣಿನಲ್ಲಿ ಜನಿಸಿದ್ದೇನೆ[೭]

ಮನುಷ್ಯನ ಹೊರಯುದ್ಧಕ್ಕಿಂತ ಅಂತರಂಗದ ಯುದ್ಧವೇ ಭಯಂಕರವಾದುದು ಯುದ್ಧ ಹುಟ್ಟುವದು ಮನದಲ್ಲಿ ತಾನೆ? ಅದಕ್ಕೆ ಕೊನೆಯಿಲ್ಲ ಇಂಥ ಯುದ್ಧದ ಪರಿಣಾಮದ ಚಿತ್ರ, ಪಂಜಾಬಿನಲ್ಲಿ ವಾಸಿಸುವವರ ಮನಸ್ಥಿತಿಯನ್ನು ನಿರ್ದೇಶಿಸುವ ಈ ಕವನವು ಪ್ರಜ್ಞಾವಂತ ಕವಿಯೋರ್ವನ ನೊಂದ ಮನದ ಹೇಳಿಕೆಯಾಗಿದೆ.

ಭಾಷಣಗಳ ಭಾಷೆ
ಯಾವಾಗಲೂ ಬೇರೆಯಾಗಿರುತ್ತದೆ
ಆದರೆ ರೋಧಿಸುತ್ತಿರುವ ಅಕ್ಕತಂಗಿಯರ
ಭಾಷೆ ಯಾವಾಗಲೂ ಒಂದೇ ಆಗಿರುತ್ತದೆ[೮]

ಎಂಬ ಅನುವಾದ ಮೂಲಕ್ಕಿಂತ ಸೊಗಸಾಗಿದ್ದು ಪರಿಣಾಮಕಾರಿಯಾಗುತ್ತದೆ. ಗೋಧಿ ಬೆಳೆಯುವ ಭೂಮಿ ಪಂಜಾಬಿನದು ಅಲ್ಲಿಯ ರೈತ ಅದರ ಯಜಮಾನ ಆದರೆ ಆ ದಶಕದಲ್ಲಿ ತನ್ನ ಅಸ್ತಿತ್ವವನ್ನೇ ಅಲುಗಾಡಿಸಿ ಕೊಂಡಿರುವ ರೈತನ ಹಸರು ಹೇಗೆ ಬಂದಿದೆ? ನೋಡಿ

'ಗೋಧಿ ಬೆಳೆಯುವವನಿಗೂ
ಗೋದಿ ಖರೀದಿಸಬೇಕಾಗುವುದು
ಅವನಿಗೆ ನಮ್ಮ ದೇಶದಲ್ಲಿ
ರೈತ ಎಂದು ಕರೆಯುತ್ತಾರ'[೯]

ತನ್ನ ನೆಲವನ್ನು ಸದಾ ಪ್ರೀತಿಸುವವನು ಹಾಗೂ ತನ್ನ ನಾಡನ್ನು ವೈರಿಗಳಿಂದ ರಕ್ಷಿಸಲು ಎಂದೆಂದಿಗೂ ಮುಂದಾಗುವ ಸಂಸ್ಕೃತಿಯುಳ್ಳವನು ಪಂಜಾಬಿ ಪ್ರಜೆ ದೇಶಕ್ಕೆ ಅನ್ನ ಕೊಡುವ ಸಮೃದ್ಧ ರೈತನಾತ. ಆದರೆ ಆತನಿಗೆ ಎಂಥ ಕಷ್ಟ ಬಂದಿದೆ ಎಂಬುದನ್ನು ಮೇಲಿನ ಈ ಮಿನಿಗವಿತೆ ತಿಳಿಸುತ್ತದೆ.

ಹಾಗೆಯೇ ಇವತ್ತು ಮನುಷ್ಯನ ಆಯುಷ್ಯಕ್ಕೆ ಮಾರಕವಾಗುವ 'ಬಂದೂಕು' ಕವನ ಎಷ್ಟು ಮನೋಜ್ಞವಾಗುತ್ತದೆ.

---

೮ ಡಾ. ಕಾಶಿನಾಥ ಅಂಬಲಗಿ – ಕೋಗಿಲೆ ಅಳುತಿದೆ – ೯೩ – ಪುಟ ಸಂ. ೮
೯. ಡಾ. ಕಾಶಿನಾಥ ಅಂಬಲಗಿ – ಕೋಗಿಲೆ ಅಳುತಿದೆ – ೯೩ – ಪುಟ ಸಂ. ೮

ತಮಗೆ ದೀರ್ಘಾಯು ಆಗಲು
ಮನಸ್ಸಿಲ್ಲವೆಂದು ಕಾಣುತ್ತದೆ
ಬಹುಶಃ ಅದಕ್ಕಾಗಿಯೇ ತಾವು
ನನ್ನನ್ನು ನಿರ್ಮಿಸಿದ್ದೀರೆಂದು ಕಾಣುತ್ತದೆ[೧೦] (ಚಾಹಲ)

ಮನುಷ್ಯನ ಅಸಹಾಯಕ ಸಾವು ಅನೇಕ ದುರಂತಗಳನ್ನು ತಂದು ಬಿಡುತ್ತದೆ. ಸಾವು ಬಿಟ್ಟು ಹೋಗಿರುವ ಹೆಜ್ಜೆ ಗುರುತುಗಳು ಜೀವನದಲ್ಲಿ ಎಷ್ಟೊಂದು ಭಯ ಹಾಗೂ ಆತಂಕಗಳನ್ನು ಸೃಷ್ಟಿಸುತ್ತದೆ. ಎಂಬುದರ ಗಾಢತೆಯನ್ನು

ನಮ್ಮ –
ಎದುರಿನಲ್ಲಿಯೇ ಅವನು ಸತ್ತನು
ನಾವು ಬದುಕಿ ಉಳಿದೆವು
ಬಹುಶಃ ಬದುಕಿಯೂ ಸತ್ತವರಂತೆ
ನಾವು ಬದುಕಿ ಉಳಿದೆವು[೧೧] (ಸುರಜಿತ ಪಾತ)

ಎಂಬ ರೀತಿಯಲ್ಲಿ ಅನುವಾದಗೊಂಡಿದೆ. ಯಾರಿಗೂ ಸಾವು ಬಿಡುವುದಿಲ್ಲ ಎಂಬ ವಾಸ್ತವತೆಯ ಚಿತ್ರಣವನ್ನು ––

ಅವನು ಬಾಯಿಬಲ್
ಮೇಲೆ ಕೈ ಇಟ್ಟಿದ್ದ
ಪ್ರತಿಜ್ಞೆ ಮಾಡಿದ
ಆನಂತರ ಮಡಿದ12 (ಸರೋದ ಸುದೀಪ)

ಎಂದು ಸಹಜವಾಗಿ ಮೂಡಿ ಬಂದಿದೆ. ಮನುಷ್ಯನ ನೋವುಗಳು ಅವನ ಸಾವಿನೊಂದಿಗೆ ಕೊನೆಯಾಗುವುದಿಲ್ಲ ಬದಲಿಗೆ ಹಿಂದೆ ಉಳಿದವರಿಗೆ ಅದು ನೋವಾಗಿ ಕಾಡುತ್ತದೆ. ಹಾಗಾದಾಗ ಸಾವು ನೀಡುವವರನ್ನು ಕುರಿತು – ಅವರ್ಯಾರಿದ್ದಾರೆ . . . . .

ಹಾಲುಹಣ್ಣು ಕೋದಿಯನ್ನು
ನಮ್ಮ ಪ್ರೀತಿಯ ಕವಿತೆಗಳನ್ನು
ನಮ್ಮಿಂದ ಕಸಿಯುತ್ತಿದ್ದಾರೆ?
ಅವರ್ಯಾರಿದ್ದಾರೆ . . . .?
ನಮ್ಮ ಕೈಗಳಲ್ಲಿ . . . . . ?? ಎಂದು ಕೇಳುತ್ತ ಸಾವಿಗೆ ಕಾರಣವಾಗಿರುವ ಮಾನವರನ್ನೇ ಇಲ್ಲಿ ಹೃದಯ ತೆರೆದು ತೋರಿಸುತ್ತದೆ. ಈ ಸಾವಿನ

---

೧೦. ಕಾಶಿನಾಥ ಅಂಬಲಗಿ – ಕೋಗಿಲೆ ಅಳುತಿದೆ – ೯೩ – ಪುಟ ಸಂ. ೩೯
೧೧. ಕಾಶಿನಾಥ ಅಂಬಲಗಿ – ಕೋಗಿಲೆ ಅಳುತಿದೆ – ೯೩ – ಪುಟ ಸಂ. ೧೩
೧೨. ಕಾಶಿನಾಥ ಅಂಬಲಗಿ – ಕೋಗಿಲೆ ಅಳುತಿದೆ – ೯೩ – ಪುಟ ಸಂ. ೨೬

ನೋವನ್ನು ಮೀರುವುದಕ್ಕಾಗಿಯೇ ಮನುಷ್ಯನು ಹೊಸ ಹೊಸ ಸಂಬಂಧಗಳ ಹುಡುಕಾಟಕ್ಕೆ ತೊಡಗುತ್ತಾನೆ.

ಗೂಡುನಾಶವಾದ ಮೇಲೂ
ಹಕ್ಕಿಗಳು ಗೂಡಿಗೆ ಹೀಗೆ ಹಿಂತಿರುಗಿವೆ
ಕಡ್ಡಿ ಕಡ್ಡಿ ಕೂಡಿ ಗೂಡು ಕಟ್ಟುವ
ಮರಿಗಳಿಗೆ ಅಕ್ಕರೆಯ ಅನ್ನ ಇಕ್ಕುವ
ಆಶೆಗಳ ಅವು ಹೊಂದಿವೆ[೧೩] (ಸರೋದ ಸುದೀಪ)

ಈ ಸಂದರ್ಭದ ಪಂಜಾಬಿನಲ್ಲಿ ಯಾರ ಕೊಲೆ ಯಾರು ಮಾಡುತ್ತಿರುವರೋ ಎಮಬುದು ಗೂಢವಾಗಿ ಕಾಣುತ್ತದೆ. ಆತಂಕವಾದಿಗಳ ಬಂದೂಕು ಹಾಗೂ ಪೋಲೀಸರ ಬೂಟುಗಳು ಅಟ್ಟಹಾಸದಲ್ಲಿ ಜನಮಾನಸ ನಲುಗಿಹೋಗಿದ್ದು ಅಲ್ಲಿಯ ಪ್ರಜೆಗಳು ಅಂತಹ ವಾತಾವರಣದಲ್ಲಿಯೂ ಪ್ರೀತಿ ನೀಡುವ ಗುಣವನ್ನೇ ಮೆರೆಯುತ್ತಾರೆ ಎಂಬುದನ್ನು ಇಲ್ಲಿ ತೋರಿಸುತ್ತಾರೆ.

ಬೂಟಿನ ಸಪ್ಪಳ ಕೇಳಿ
ಮಗು ಚಪ್ಪಾಳೆ ತಟ್ಟುತ್ತದೆ!
ತಾಯಿ ಕಪಾಳಕ್ಕೆ ಬಿಗಿಯುತ್ತಾಳೆ(ಕರ್ಫ್ಯೂ 2)
ಮಗು ಹಾಲು ಕೇಳುತ್ತಿದೆ
ತಾಯಿ ಅಸಹಾಯಕಳಾಗಿದ್ದಾಳೆ
ತಂದೆ ಹೊರಗೆ ಇಣುಕುತ್ತಾನೆ
ಗುಂಡು ವೇಗವಾಗಿ ಎದೆವಡೆಗೆ ಬರುತ್ತದೆ![೧೪] (ಕರ್ಫ್ಯೂ 1)

ಪ್ರಜಾಪ್ರಭುತ್ವದ ವ್ಯವಸ್ಥೆಯೊಂದನ್ನು ಒಪ್ಪಿಕೊಂಡಿರುವ ಈ ದೇಶದ ಒಂದು ರಾಜ್ಯದಲ್ಲಿ ತಿಂಗಳುಗಟ್ಟಲೇ ಕರ್ಫ್ಯೂಹೇರಿ ಪೋಲೀಸರ ಬೂಟಿನ ಧ್ವನಿಯಿಂದ ಹಿಂಸೆ ಹಾಗೂ ಗುಂಡಿನಿಂದ ಸಾಯುತ್ತಿದ್ದ ವಾತಾವರಣವನ್ನು ಅಲ್ಲಿಯ ನಿಶಬ್ದತೆಯ ಮೂಲಕ ತೋರಿಸುತ್ತಿರುವುದು ಈ ಕವನಗಳ ಜೀವಂತಿಕೆ ಎನ್ನಬಹುದು.

ನಾನಂತೂ
ಸ್ಮಶಾನದಲ್ಲಿ ನೆಟ್ಟ ವೃಕ್ಷವಾಗಿದ್ದೇನೆ
ಬೆಂಕಿಯಿಟ್ಟು ಎಲ್ಲರೂ ಹೋದ ನಂತರ
ನನ್ನ ಪಾಲಿನ ಕಣ್ಣೀರು ಸುರಿಸುತ್ತೇನೆ[೧೫]
(ಸ್ಮಶಾನದ ವೃಕ್ಷ ಪರಮಜೀತ್ ಸೊಹರ್)

---

೧೩. ಕಾಶಿನಾಥ ಅಂಬಲಗಿ – ಕೋಗಿಲೆ ಅಳುತಿದೆ – ೯೩ – ಪುಟ ಸಂ. ೬೨
೧೪. ಕಾಶಿನಾಥ ಅಂಬಲಗಿ – ಕೋಗಿಲೆ ಅಳುತಿದೆ – ೯೩ – ಪುಟ ಸಂ. ೫೧
೧೫. ಕಾಶಿನಾಥ ಅಂಬಲಗಿ – ಕೋಗಿಲೆ ಅಳುತಿದೆ – ೯೩ – ಪುಟ ಸಂ. ೮೪

ಪ್ರಕೃತಿಗೆ ಅತೀ ಹತ್ತಿರದ ಜೀವ ಆ ಪಂಜಾಬಿ ಪ್ರಜೆಯದು ಅಲ್ಲಿಯ ಗಿಡ, ಮರ, ಗಾಳಿ, ವಾತಾವರಣವೆಲ್ಲ ಈತನ ಸಂಕಟದ ಸಮಯದಲ್ಲಿ ಭಾಗಿಯಾಗುತ್ತವೆ. ಅವನ ಸಹಜ ದೇಶಾಭಿಮಾನ ಹಾಗೂ ನಾಡು ದ್ವೇಷದ ನಾಡಿ ಮಿಡಿತಗಳು ಅವನನ್ನು ಮುನ್ನಡೆಸಿರುವುದನ್ನಿಲ್ಲಿ ಗುರುತಿಸಬಹುದು.

ಪಂಜಾಬಿನ ಪ್ರಜ್ಞಾವಂತ ಕವಿಯ ಹಾಗೆಯೇ ಡಾ. ಅಂಬಲಗೆಯವರು ಸಹ ಮೂಲತಃ ಸಮಾಜವಾಗಿ ಮನಸುಳ್ಳವರು ಮೂಲಭೂತವಾದಿಗಳ ಹೊಸತನವನ್ನು ಸಹಿಸದವರು. ಪ್ರಾಮಾಣಿಕವಾದ ಬದುಕಿನ ನೆಲೆಯನ್ನು ಅಹಿಂಸೆಯ ನೆಲೆಯಲ್ಲಿ ಸದಾ ಕಾಣಲು ಪ್ರಯತ್ನಿಸುತ್ತಿರುವವರು. ಹೀಗಾಗಿ ಸಾವು ನೋವುಗಳೊಂದಿಗೆ ಅನುವಾದಕರೂ ಸಂವಾದ ಮಾಡುವದನ್ನು ಇಲ್ಲಿ ಗುರುತಿಸಬಹುದು.

ಈ ಮನೆಯ ಬಾಗಿಲುಗಳಲ್ಲಿ
ಒಂದು ಕಾಲದಲ್ಲಿ ಜ್ಯೋತಿ ಬೆಳಗುತ್ತಿದ್ದವು
ಒಂದೊಂದಾಗಿ ಈಗ ಬತ್ತಿ ಹೋಗುತ್ತಿದೆ
ಅವುಗಳಿಗೆ ನಮ್ಮ ರಕ್ತ ಸಿಕ್ತ
ಇತಿಹಾಸದ ಅಭಿಮಾನವಿತ್ತು
ಈಗ ಇಡೀ ಮನೆಯೇ ರಕ್ತಸಿಕ್ತವಾಗಿದೆ
ಎಂದೂ ಮುಗಿಯದ ಭಯದ ತತ್ತಲೆಚಿಯಾಗಿದೆ
ಹಾಳುಬಿದ್ದ ಭಯ ಆತಂಕಗಳ ನಾನು
ಅನಾಥ ಯಾತ್ರಿಕನ ಮಾತು ಮಾತ್ರನು[೧೬]

ಮಣ್ಣಿನೊಂದಿಗೆ ಸದಾ ತನ್ನನ್ನು ಗುರುತಿಸಿಕೊಳ್ಳುವ ಕವಿ ವಾಸ್ತವಿಕತೆಯೊಂದಿಗೆ ಮಣ್ಣಿನ ಮಹತ್ವವನ್ನು ಅರುಹುತ್ತಾನೆ.

ಮಣ್ಣಿಗೂ ಒಂದು ವಾಸನೆಇದೆ
ಅದು ಸುಂದರವ್ಹೂ ಆಕರ್ಷವ್ಹೂ ಆಗಿದೆ
ಆಗತ್ತಿನ ಎಲ್ಲ ಸುಗಂಧಗಳಿಗೆ ಮೀರಿದ್ದು
- - - - - - - - - - - - -
- - - -- - - - - - - - -
‘ಹಸಿವು’ ಈ ಜಗತ್ತಿನ ಅತ್ಯಂತ ಕುರೂಪಿ ಶಬ್ದ!
‘ರೊಟ್ಟಿ’ ಈ ಜಗತ್ತಿನ ಅತ್ಯಂತ ಸುಂದರ ಶಬ್ದ!![೧೭]

---

೧೬. ಡಾ. ಕಾಶಿನಾಥ ಅಂಬಲಗಿ ಸಮಕಾಲೀನ ಪಂಜಾಬಿ ಕವಿತೆಗಳು – ೯೩ – ಪುಟ ಸಂ. ೩೩
೧೭. ಡಾ. ಕಾಶಿನಾಥ ಅಂಬಲಗಿ ಸಮಕಾಲೀನ ಪಂಜಾಬಿ ಕವಿತೆಗಳು – ೯೩ – ಪುಟ ಸಂ. ೫೫

ಈ ರೀತಿ ಮಣ್ಣಿನೊಂದಿಗಿದ್ದು ಸಂವಾದಕ್ಕಿಳಿಯುವ ಕವಿಯ ಮನೋಧರ್ಮವೇ ಇಲ್ಲಿ ನಿಜವಾದ ಕಾವ್ಯವಾಗಿದ್ದು, ನಿಜ ಅರ್ಥದಲ್ಲಿ ಅದು ಮಣ್ಣಿನ ಕಾವ್ಯವೇ ಆಗಿ ನಿಲ್ಲುತ್ತದೆ.

ಎಲ್ಲ ದೇಶಗಳ ಮೂಲಭೂತವಾದಿಗಳಂತೆ ಇಲ್ಲಿಯೂ ಧರ್ಮವನ್ನು ಹೇಗೆ ಮನುಷ್ಯನ ಕುತ್ತಿಗೆ ಕತ್ತರಿಸಲು ಬಳಸುತ್ತಾರೆ.

ಎನ್ನಲು

ಶಸ್ತ್ರಗಳ ತುದಿಯಲ್ಲಿ
ನೇತಾಡುವ ಹಿರಿಯರ
ಅಸಹಾಯಕ ಶರೀರ – ಧರ್ಮ – (ಸ್ವರ್ಣಜೀತ)
ಸೊಕ್ಕಿದ ಗೂಳಿಯ ಮೇಲೆ
ಕುಳಿತು

ಅವನು "ಶಾ . . .ಂತಿ" ಎನ್ನುತ್ತಿದ್ದಾನೆ[೧೮] (ನಾಮಕ)
ಇಲ್ಲಿ ಎಲ್ಲವೂ ಬೆಂಕಿಯು ತಾಗಿದೆ
'ಕವಿತೆ' ಯಂತಹದೇನೂ ಉಳಿದಿಲ್ಲ[೧೯] (ದರ್ಶನ ವೀರೇಶ)

ಎಂಬಂತಹ ಹಲವಾರು ಕವಿತೆಗಳು ಧ್ವನಿಗೈದು ಹೇಳುತ್ತವೆ. ಅಧಿಕಾರದ ರಾಜಕೀಯ ಹೇಗೆ ರಕ್ತದೋಕುಳಿಯ ಹಿಂಸಾ ರಾಜ್ಯವನ್ನು ನಿರ್ಮಾಣ ಮಾಡುತ್ತದೆ. ಎಂಬುದಕ್ಕೆ ಪಂಜಾಬಿನ ಕೊಲೆಗಳೇ ಸಂಕೇತವಾಗಿ ನಿಲ್ಲುತ್ತವೆ.

ಇಲ್ಲಿ ನಡೆದ ಆತಂಕವಾದ, ಯುದ್ಧ, ಕೊಲೆ, ರಕ್ತಪಾತ, ಸಿಟ್ಟು, ಆಂದೋಲನಗಳು ಪಂಜಾಬಿನ ಚಿತ್ರವನ್ನೇ ಬದಲಿಸಿರುವುದು ಸ್ಪಷ್ಟವಾಗುತ್ತದೆ. ಹಿಂದೆ ಹೊಲಗಳಲ್ಲಿಯೇ ಪಂಜಾಬಿನ ಬದುಕಿತ್ತು. ಅಲ್ಲಿ ನೇಗಿಲು ಭೂಮಿಯಲ್ಲಿ ಬೀಜ, ಬೀಜದಲ್ಲಿ ಬೆಳೆ, ಬೆಳೆಯಲ್ಲಿ ರೊಟ್ಟಿಗಳಿದ್ದವು. ಈಗ ಹೊಲಗಳಲ್ಲಿ ಏನೆಲ್ಲ ಇದೆ, ಯುವಕರ ಹೆಣಗಳಿವೆ, ಆ ಮಣ್ಣಿನಲ್ಲಿ ರಕ್ತದ ಹನಿಗಳಿವೆ, ಗುಂಡುಗಳ ಗುಡುಗು ತುಂಬಿದೆ, ದುಃಖ ದುಮ್ಮಾನಗಳಿಗೆ ಆಶ್ರಯದ ತಾಣವಾಗಿರುವ ಪಂಜಾಬ ಎಲ್ಲವೂ ಶಾಪಗ್ರಸ್ತವಾಗಿದೆ.[೨೦] ಇತ್ತೀಚಿನ ದಿನಮಾನಗಳೆಂದರೆ

ಹಣೆಯಲ್ಲಿ ತಿಲಕವಿಟ್ಟು
ತಲೆಗೆ ರುಮಾಲು ಕಟ್ಟಿ
ತ್ರಿಶೂಲ ಕೈಗಳಲ್ಲಿ
ಖಡ್ಗವು ಬಗಲಲ್ಲಿ

---

೧೮. ಡಾ. ಕಾಶಿನಾಥ ಅಂಬಲಗಿ ಸಮಕಾಲೀನ ಪಂಜಾಬಿ ಕವಿತೆಗಳು – ೯೩ – ಪುಟ ಸಂ. ೪೯

೧೯. ಡಾ. ಕಾಶಿನಾಥ ಅಂಬಲಗಿ ಸಮಕಾಲೀನ ಪಂಜಾಬಿ ಕವಿತೆಗಳು – ೯೩ – ಪುಟ ಸಂ. ೫೮

೨೦. ಡಾ. ಕಾಶಿನಾಥ ಅಂಬಲಗಿ ಸಮಕಾಲೀನ ಪಂಜಾಬಿ ಕವಿತೆಗಳು – ೯೩ – ಪುಟ ಸಂ. ೫೩

ನಾನು ಉಸಿರಾಡುತ್ತಿದ್ದೇನೆ
ಸಿಡಿಮದ್ದಿನ ಗಾಳಿಯಲ್ಲಿ [೨೧] (ರಣಜೀತ ಮಾ)

ಹಾಗೆಯೇ ಒಡೆದ ಬಳೆಗಳ ನರಳಾಟಕ್ಕೆ ನಾನು ಗೀತೆ ಎಂದು ಕರೆಯುತ್ತೇನೆ. ಹೀಗೆ ಭಯ ಬೀಳುವ ವಾತಾವರಣವನ್ನು ಸೃಷ್ಟಿಸಿದ ಮಾನವೀಯತೆಯ ಸಾವಿನ ನೋವಿನ ರೀತಿಯನ್ನು ಕಾಣುವದು ಕೇಳುವದು ಅಂದಿನ ಬದುಕಿಗೆ ದುರಂತವಾಗಿತ್ತು "ಮೋಡಗಳನ್ನು ಮಾಳಿಗೆ ಎನ್ನುವ ಹಾಗೂ ಬಾಂಬುಗಳನ್ನು ಚೆಂಡು ಎಂದು ಆಡುವ ಸ್ಥಿತಿ ಪಂಜಾಬದಲ್ಲಿ ಇತ್ತು".

ಇಂತಹ ಸ್ಥಿತಿಗತಿಗಳನ್ನು ಕುರಿತು ಆದರ್ಶೀಕರಣಗೊಳ್ಳುವ ಕವಿಗಳು ಮೌನಿ ಆಗಿದ್ದರು. ವಿಚಾರವಾದ ಮತ್ತು ವಾಸ್ತವಿಕತೆಗಳನ್ನು ಈ ಕವಿತೆಗಳ ರೂಪದಲ್ಲಿ ಕಾವ್ಯಮಯವಾಗಿ ಕಟ್ಟಿ ಹೇಳಿದ್ದಾರೆ. ಪಾಶ್, ಮಿಂದರ್, ಹರಿಭಜನ್, ರಾಮಸಿಂಹ ಚಾಹಲರಂತಹ ಪ್ರಮುಖ ವಿಚಾರವಾದಿ ಕವಿಗಳು ಹಿಂಸಾ ವಿರೋಧಿ ಈ ವ್ಯವಸ್ಥೆಗೆ ವಿರೋಧಿ

ಯುವ ಕವಿ ಕೊಲೆಯಾದಂತಹ ಪಂಜಾಬ ಮಣ್ಣಿನ ಈ ದಶಕದಲ್ಲಿ ಅಲ್ಲಿನ ಆತಂಕಮಯ ವಾತಾವರಣವನ್ನು ಕಂಡು ಆ ವಾತಾವರಣದ ಕಣ್ಣಿರಿನ ಕಾವ್ಯವನ್ನು ರಚಿಸಿದರು. ಯಾವದೇ ಬಾಷೆಯ ಪ್ರಗತಿಪರ ವಿಚಾರವುಳ್ಳ ಪ್ರಜ್ಞಾವಂತ ಕವಿಗಳಿಗೆ ಆಸಕ್ತಿ ಹುಟ್ಟಿಸುವ ಈ ಕಾವ್ಯ ಪ್ರಪಂಚವು ಕನ್ನಡದಲ್ಲಿಯೂ ಬರಲೆಂದು ಆಶೆಯಿಂದ ಹಾಗೂ ಈ ಕವಿತೆಗಳು ತಮ್ಮ ಜನಕ್ಕೆ ಪ್ರೇರಕ ಶಕ್ತಿಯಾಗಲಿ ಇವು ಕನ್ನಡಿಗರೊಂದಿಗೆ ಮಾತನಾಡಲಿ, ಕನ್ನಡಿಗರ ಹೃದಯ ಪ್ರವೇಶಿಸಲು ಎಂದು ಅನುವಾದಕರು ಭಾವಿಸಿದ್ದಾರೆ. "ಭಾರತೀಯರ ಮನಸ್ಸುಗಳನ್ನು ಒಂದಾಗಿಸಲು, ಭಾರತೀಯರ ಮನಸ್ಸುಗಳನ್ನು ಆಭ್ಯಾಸಿಸುವದು ಅನಿವಾರ್ಯವಾಗಬೇಕು ಆ ದಿಕ್ಕಿನಲ್ಲಿ ಅನುವಾದ ಕಾರ್ಯ ಅತೀ ಅವಶ್ಯಕವಾಗುತ್ತದೆ. ಇಂಥ ಅನುವಾದಗಳಲ್ಲಿ ಅರ್ಥಗಳ ಸೋರುವಿಕೆ ಸಹಜವಾದರೂ ಅದನ್ನು ಅಥವಾ ಕಡಿಮೆ ಮಾಡುವ ಪ್ರಯತ್ನ ಪ್ರಶಂಸನೀಯ[೨೨] ಈ ಎಲ್ಲಾ ಮಾತಿನಂತೆ ಅಂಬಲಗಿಯವರು ಪ್ರಾಮಾಣಿಕವಾಗಿ ಪ್ರಯತ್ನಿಸಿರುವದನ್ನು ಗುರುತಿಸಬಹುದಾಗಿದೆ.

ಒಟ್ಟಾರೆಯಾಗಿ ಈ ಅನುವಾದ ಕಾವ್ಯದಲ್ಲಿ ಸಾಧ್ಯವಾದಷ್ಟು ಮೂಲ ಕೃತಿಯ ವಸ್ತುಗಳಿಗೆ ಚುತಿ ಬರದಂತೆ ಡಾ. ಅಂಬಲಗೆಯವರು ಪ್ರಯತ್ನಿಸಿರುವದು ಎದ್ದು ಕಾಣುತ್ತದೆ. ಶಬ್ದಶಃ ಅನುವಾದದ ಶೃಂಖಲೆಯನ್ನು ಕಳಚಿರುವ ಅಂಬಲಗಿಯವರ ಮೂಲಭಾಷೆಯ ಕವನಗಳ ವಿಚಾರಗಳು ಕನ್ನಡ ಭಾಷೆಯಲ್ಲಿ ಸ್ಪಷ್ಟವಾಗಿ ಮೂಡುವಂತೆ ಶಬ್ದಗಳ ಮೇಲೆ ಅವಧಾರಣೆ ಕೊಡದೆ ವಿಚಾರಗಳ ಮೇಲೆ ಗಮನವಿಟ್ಟಿದ್ದು

---

೨೧. ಡಾ. ಕಾಶಿನಾಥ ಅಂಬಲಗಿ ಸಮಕಾಲೀನ ಪಂಜಾಬಿ ಕವಿತೆಗಳು – ೯೩ – ಪುಟ ಸಂ. ೬೬

೨೨. ಡಾ. ಕಾಶಿನಾಥ ಅಂಬಲಗಿ ಕೋಗಿಲೆ ಅಳುತಿದೆ ಮುನ್ನುಡಿಯಲ್ಲಿ –ಪುಟ ಸಂ. X

ಸ್ಪಷ್ಟವಾಗುತ್ತದೆ. ಅಂದರೆ ಮೂಲಕೃತಿಯಲ್ಲಿಯ ವಿಚಾರಗಳು ಇಲ್ಲಿ ಸ್ಪಷ್ಟವಾಗಿ ಅಭಿವ್ಯಕ್ತಗೊಂಡಿದ್ದು ಅನುವಾದದಲ್ಲಿರುವ ಅವರ ಗಟ್ಟತನವನ್ನು ವ್ಯಕ್ತಗೊಳಿಸುತ್ತದೆ. ಈ ಅನುವಾದ ಕಾರ್ಯದಲ್ಲಿ ರೀತಿ (manner) ವಸ್ತು (matter) ಎರಡೂ ಉತ್ಕೃಷ್ಟವಾಗಿ ಮೂಡಿ ಬಂದಿದ್ದು, ಅನುವಾದಕನ ಮಹತ್ವವನ್ನು ತಿಳಿಸುತ್ತದೆ. ಮೂಲದ ಪರಿಸರ ರೀತಿ ಪರಿಣಾಮಕಾರಿಯಾಗಿ ಇಲ್ಲಿಯ ಅನುವಾದದಲ್ಲಿ ಅಭಿವ್ಯಕ್ತಗೊಂಡಿರುವದನ್ನು ನಾವಿಲ್ಲಿ ಗುರುತಿಸಬಹುದಾಗಿದೆ.

## ೩ : ೨ ಸಮಕಾಲೀನ ಪಂಜಾಬಿ ಕವಿತೆಗಳು :

ಒಂದು ಸಾವಿರದ ಒಂಬತ್ತು ನೂರಾ ತೊಂಭತ್ತರ ದಶಕ ಪಂಜಾಬ ಇತಿಹಾಸದಲ್ಲಿಯೇ ಒಂದು ಕಹಿ ಪ್ರಸಂಗವಾಗಿತ್ತು. ಆಗ ಅಲ್ಲಿ ನಡೆದ ಸಾವು ನೋವುಗಳ ಸಂಧರ್ಬಗಳು ಭಾರತವನ್ನಷ್ಟೇ ಅಲ್ಲ ಇಡೀ ವಿಶ್ವವನ್ನು ದಿಗ್ಮೂಢಗೊಳಿಸಿದ್ದವು. ಅಲ್ಲಿನ ದೈಹಿಕ ಹಗೂ ಮಾನಸಿಕ ಹಿಂಸೆಗಳು ಭಾರತೀಯರ ಮನಸ್ಸುಗಳನ್ನು ಕದಡಿದ್ದವು ಬದುಕಿನಲ್ಲಿ ಸುರಕ್ಷತತೆಗಾಗಿ ಬಡಿದಾಡುವ ಮನುಷ್ಯನ ಮನಸ್ಸಿನ ಮಾತಿನಲ್ಲಿ ಆಕ್ರಮಣಕಾರಿ ಹಾಗೂ ಹಿಂಸಾ ಪ್ರವೃತ್ತಿಯಿರುವುದನ್ನು ಹೊರಹಾಕುವ ಪಂಜಾಬಿನ ಅಂದಿನ ಸಮಸ್ಯೆ ದೇಶದ ಪ್ರಗತಿಪರ ಚಿಂತನೆಯುಳ್ಳ ಅನೇಕ ಸೃಜನಶೀಲ ಮನಸ್ಸುಗಳನ್ನು ತಟ್ಟಿತು ಹೀಗಾಗಿ ಆ ಸಂದರ್ಭಕ್ಕೆ ಸ್ಪಂದಿಸಿದ ಡಾ. ಅಂಬಲಗೆಯವರ ಕವಿ ಹೃದಯ ಪಂಜಾಬಿನ ಅಂದಿನ ದುಸ್ಥಿತಿಯನ್ನು ಕನ್ನಡಿಗರಿಗೆ ಮನದಟ್ಟು ಮಾಡಿಕೊಡಲು ದಾರಿ ಹುಡುಕಿತು. ಅದರ ಪರಿಣಾಮವಾಗಿ ಮೂಡಿಬಂದ ಕೃತಿ ಎಂದರೆ ಸಮಕಾಲೀನ ಪಂಜಾಬಿ ಕವಿತೆಗಳು ಎಂಬ ಅನುವಾದ ಕಾವ್ಯ.

ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು ಇವರಿಂದ ಪ್ರಕಾಶಿತವಾಗಿರುವ ಈ ಕಾವ್ಯಾನುವಾದದ ಸಂಪಾದಕರು ಡಾ. ಕಾಶಿನಾಥ ಅಂಬಲಗೆಯವರು ಇಲ್ಲಿ ೨೭ ಜನ ಮೂಲ ಕವಿಗಳ ನಲವತ್ತ್ಮೂರು ಕವನಗಳನ್ನು (ಮಿನಿ ಕವಿತೆಗಳನ್ನು ಸೇರಿಸಿ) ಸಂಪಾದಿಸಲಾಗಿದ್ದು ಅದರಲ್ಲಿ ಡಾ. ಕಾಶೀನಾಥ ಅಂಬಲಗಿಯವರು

೧) ಪಾಶರ ೩ ಕವನಗಳು
- ಅ) ಹಸಿರು ಹೊಡೆದುಹಾಕಿ
- ಆ) ಕವಿತೆ
- ಇ) ಪಾರ್ಲಿಮೆಂಟ

೨) ಸುರಜೀತ ಪಾತ್ರರ ೨ ಕವಿತೆಗಳು
- ಅ) ಮನೆಗಳಿಗೆ ಹಿಂತಿರುಗುವದು ಹೇಗೆ?
- ಆ) ಪಂಜಾಬ ೧೨೩೪೫

೩) ಸತ್ತಿಂದರ ಸಿಂಹ ನೂರರ ೨ ಕವಿತೆಗಳು
- ಅ) ಕಾಲಂಡರಿನಿಂದ ಮಾಯವಾದ ದಿನಗಳು
- ಆ) ಲಾಹೋರ ರಸ್ತೆ

೪) ರಾಮಸಿಂಹ ಚಾಹಲರ
- ಅ) ಧರ್ಮ
- ಆ) ಕವಿತೆ ಇಲ್ಲವಾದರೆ

ಇ) ಬೆಂಕಿ ೧–೨.

ಈ) ಯುದ್ಧ

ಉ) ನನ್ನ ಮಾತೃಭೂಮಿ

ಊ) ರೈತ

೫) ಶ್ರೀಮತಿ ಪಾಲಕಾರ ಅವರ

ಅ) ಸ್ವೀಕಾರದ ನಂತರ

ಆ) ತಮ್ಮ ತಮ್ಮ ಸೂರ್ಯ

೬) ಶ್ರೀಮತಿ ಅಮರಜೀತ ಘುಮ್ಮಣ ಅವರ

ಅ) ಕೇಳವ್ವ ತಾಯಿ ! ನನ್ನ ದೇವತೆಯೇ !

ಆ) ಪೂಜಾ ಸ್ಥಳ

ಇ) ಗಾಳಿಯ ದಿಕ್ಕು

ಈ ಮೇಲಿನ ಕವಿತೆಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರಿನ ವತಿಯಿಂದ ದಿನಾಂಕ ೬–೧೧–೧೯೯೩ರಿಂದ ೧೧–೧೧–೧೯೯೩ರ ವರೆಗೆ ಸಮಕಾಲೀನ ಪಂಜಾಬಿ ಸಾಹಿತ್ಯದ ಕನ್ನಡಾನುವಾದ ಕಮ್ಮಟವನ್ನು ವ್ಯವಸ್ಥೆಗೊಳಿಸಲಾಗಿತ್ತು. ಆ ಕಮ್ಮಟದಲ್ಲಿಯ ಆಯ್ದ ಪ್ರಾತಿನಿಧಿಕ ಕವಿತೆಗಳನ್ನು ಸಂಗ್ರಹಿಸಿ ಇಲ್ಲಿ ಸಂಪಾದಿಸಲಾಗಿದೆ.

ಉಗ್ರಗಾಮಿಗಳೆಂದು ಕರೆಸಿಕೊಳ್ಳುವವರ ಕಾರ್ಯಚಟುವಟಿಕೆ ಪ್ರಾರಂಭವಾದ ನಂತರ ಪಂಜಾಬಿನ ಬರಹಗಾರರು ಹೇಗೆ ಪ್ರತಿಸ್ಪಂದಿಸಿದರೆಂಬುದನ್ನು ತಿಳಿದುಕೊಳ್ಳುವ ಉದ್ದೇಶದಿಂದ ಅಲ್ಲಿನ ಪ್ರಾತಿನಿಧಿಕ ಕವನಗಳನ್ನು ಭಾಷಾಂತರಿಸುವದಕ್ಕಾಗಿ ನಡೆದ ಈ ಕಮ್ಮಟದಲ್ಲಿ ಸಾಹಿತ್ಯಿಕ ದೃಷ್ಟಿಯಿಂದ ತೀರಾ ಆಸಕ್ತಿದಾಯಕ ಅಂಶಗಳು ದೊರೆತವು. ಮಾನವೀಯತೆಯ ಆರಾಧಕರೆನಿಸಿದ, ಗುರುನಾನಕರ ಪ್ರೇರಣೆಯನ್ನು ಹೊತ್ತಿರುವ ಆ ನೆಲದಲ್ಲಿ ಬಂಧೂಕುಗಳು ಬಾಯಿ ತೆರೆದ ಸನ್ನಿವೇಶ ಎಂಥವರನ್ನು ಧೃತಿಗೆಡಿಸುವಂತಹದಾಗಿತ್ತು. ಮನುಷ್ಯನ ನೋವುಗಳು ಸಾವಿನೊಡನೆ ಕೊನೆಗೊಳ್ಳುವುದಿಲ್ಲ. ಅವು ಆರಂಭವಾಗುವದೇ ಸಾವಿನೊಡನೆ ಎಂಬುದನ್ನು ಅಲ್ಲಿಯ ಜನ ಕಂಡುಕೊಂಡರು. ಆ ಸಾವಿನ ನೋವನ್ನು ಮೀರುವದಕ್ಕಾಗಿ ಮನುಷ್ಯ ಹೊಸ ಹೊಸ ಸಂಬಂಧಗಳ ಹುಡುಕಾಟಕ್ಕೆ ಹೇಗೆ ತೊಡಗುತ್ತಾನೆ ತನ್ನ ಮಧ್ಯದ ಗೋಡೆಗಳನ್ನು ಆತ ಮೀರಲು ಹೇಗೆ ಪ್ರಯತ್ನಿಸುತ್ತಾನೆ ಎಂಬುದನ್ನು ಪಂಜಾಬಿನ ಕವಿಗಳು ಹೇಗೆ ಅರ್ಥ ಮಾಡಿಕೊಂಡಿದ್ದಾರೆ? ಹೇಗೆ ಪ್ರಕ್ರಿಯಿಸಿದ್ದಾರೆ? ಈ ಸನ್ನಿವೇಶ ಅವರ ಅನುಭವದಲ್ಲಿ ರೂಪ ತಾಳಿನಿಂತಿದೆ ಎಂಬಂತಹ ಹಲವಾರು ವಿಷಯಗಳು ಪಂಜಾಬಿನಿಂದ ದೊರಕಿರುವ ಕನ್ನಡಿಗರಿಗೆ ತೀರಾ ಕುತೂಹಲದ ಸಂಗತಿಗಳಾಗಿವೆ. ಅದನ್ನು ನಮ್ಮವರಿಗೆ ತಿಳಿಸುವ ದೃಷ್ಟಿಯಿಂದ ಹಮ್ಮಿಕೊಳ್ಳಲಾಗಿದ್ದ ಸಮಕಾಲೀನ ಪಂಜಾಬಿ ಕವಿತೆಗಳನ್ನು ಕನ್ನಡಕ್ಕೆ

ಭಾಷಾಂತರಿಸುವ ಕಮ್ಮಟವು ಜರುಗಿತು. ಅದು ನಿಜವಾಗಿಯೂ ತುಂಬಾ ಅತ್ಯುತ್ತಮವಾದ ಕಾರ್ಯ ಮೂಡಿತು. ಎಂಬುದನ್ನು ಈ ಅನುವಾದ ಸಂಕಲನದಿಂದ ನಾವು ಗುರುತಿಸಬಹುದಾಗಿದೆ.

ಐದು ಜನ ಪಂಜಾಬಿ ಲೇಖಕರು ಹಾಗೂ ಕನ್ನಡದ ಎಂಟು ಜನ ಭಾಷಾಂತರಕಾರರು ಭಾಗವಹಿಸಿದ್ದ ಈ ಕಮ್ಮಟದಲ್ಲಿ ಐದು ದಿನಗಳ ಕಾಲ ನಡೆದ ಪರಸ್ಪರ ವಿಚಾರ ವಿನಿಮಯದಿಂದ ಭಾಷಾಂತರಿಸಲಾದ ಕವಿತೆಗಳ ಒಟ್ಟು ಫಲವೇ ಈ ಸಮಕಾಲೀನ ಪಂಜಾಬಿ ಕವಿತೆಗಳು ಓದುಗರಿಗೆ ತುಂಬಾ ಉಪಯುಕ್ತ ಕವನಗಳನ್ನು ಕೊಟ್ಟಿರುವ ಇದು ಕನ್ನಡದ ಅತ್ಯುತ್ತಮ ಕಾವ್ಯಾನುವಾದಗಳಲ್ಲಿ ಒಂದೆನಿಸಿದೆ.

'ಭಾಷಾಂತರವು ಮನುಷ್ಯರ ನಡುವಿನ ಅಂತರವನ್ನು ಕಡಿಮೆ ಮಾಡುವ ಸಾಂಸ್ಕೃತಿಕ ಸಾಧನೆ'[೧] ಎಂಬುದನ್ನು ಕವಿಯ ಕೃತಿಯು ಸಮರ್ಥವಾಗಿ ತೋರುತ್ತಿದ್ದು ಪಂಜಾಬ ಸಂಸ್ಕೃತಿಯನ್ನು ಕನ್ನಡಿಗರ ಹತ್ತಿರಕ್ಕೆ ಇದು ತಂದು ನಿಲ್ಲಿಸಿದೆ ಎನ್ನಬಹುದು.

ಈ ಸಮಯದಲ್ಲಿ ಪಂಜಾಬ ಬದಲಾವಣೆಯ ಪ್ರಭಾವ ಒಂದು ರೀತಿಯಲ್ಲಿ ದೇಶವಷ್ಟೇ ಅಲ್ಲ, ಜಗತ್ತಿನಲ್ಲಿ ಕಾಣಿಸಿಕೊಂಡಿತು ಅದು ಸಾಹಿತ್ಯದ ಮೇಲಂತು ತುಂಬಾ ಗಾಢವಾದ ಪರಿಣಾಮ ಆಯಿತನ್ನಬಹುದು. ಆ ಸಂದರ್ಭದ ಪಂಜಾಬಿ ಕಾವ್ಯ ಆಹ್ವಾನ ನೀಡಿತು. ಸಹಜವಾಗಿಯೇ ಪಂಜಾಬಿನ ನೋವಿನ ಬೆಳವಣಿಗೆಗಳಿಗೆ ಅಲ್ಲಿನ ಕಾವ್ಯವೇ ಮೊದಲು ಪ್ರತಿಕ್ರಿಯಿಸಿತು. ಅದರ ತೀವ್ರತೆ ಎಷ್ಟಿತ್ತೆಂದರೆ ಪಾಶರ ಕವಿತೆ -------- ಅನುವಾದ ಹೆಸರು ಹೊಡೆದು ಹಾಕಿ ಕವನದ ಕೆಲವು ಸಾಲುಗಳನ್ನಿಲ್ಲಿ ಗಮನಿಸಬಹುದು.

ನಾನು ನನ್ನ ಜೀವನವಿಡೀ
ಅವರ ವಿರುದ್ಧ ವಿಚಾರಿಸಿದ್ದೇನೆ ಹಾಗೂ ಬರೆದಿದ್ದೇನೆ
ಇಡೀ ದೇಶವೇ ಅವರ ಶೋಕದಲ್ಲಿ ಮುಳುಗಿದೆಯಾದರೆ
ಆ ದೇಶದಿಂದ ಖಂಡಿತವಾಗಿ ನನ್ನ ಹೆಸರು ಹೊಡೆದು ಹಾಕಿ[೨]

ಎನ್ನುವ ಕವನವು ಮೂಲ ಕವಿಯ ಭಾವವನ್ನು ಉಳಿಸಿಕೊಂಡಿರುವ ಅನುವಾದ ಕವನವಾಗಿದ್ದು ಪರಿಣಾಮಕಾರಿಯೆನಿಸುತ್ತದೆ. ಹೊಲ, ಗಣಿ, ಭಟ್ಟಿಗಳಲ್ಲಿ ಕತ್ತಲೆಯಾವರಿಸಿರು ಸ್ಥಾನಗಳಲ್ಲಿ ಒಳಸಂಚುಗಳಿರುವದರಿಂದ ಈ ಕೊಲೆಯ ಒಳಸಂಚಿನ ಸ್ಥಳವನ್ನು ಯಾವುದೇ ಪೋಲೀಸ ಪತ್ತೆ ಹಚ್ಚುವುದಿಲ್ಲ. ಏಕೆಂದರೆ ಝಗ ಝಗಿಸುವ ಟ್ಯೂಬಲೈಟುಗಳು ಕೇವಲ ರಾಜಧಾನಿಯಲ್ಲಿಯೇ ಹೊಳೆಯುತ್ತವೆ. ಎನ್ನುವ ಕವಿ ಹೃದಯ ಈ ಕೊರೆಯುವ ಕತ್ತಲೆಯಲ್ಲಿ ಹುಟ್ಟಿದಂದಿನಿಂದ ಬದುಕುವದರ ಜೊತೆಗೆ

---

೧) ಸಮಕಾಲೀನ ಪಂಜಾಬಿ ಕವಿತೆಗಳು ೧೯೯೪ ಅಧ್ಯಕ್ಕರ ಮತು – ಪುಟ ಸಂ. ೧
೨) ಸಮಕಾಲೀನ ಪಂಜಾಬಿ ಕವಿತೆಗಳು ೧೯೯೪ ಅಧ್ಯಕ್ಕರ ಮತು – ಪುಟ ಸಂ. ೨

ವಿಚಾರಿಸುವದನ್ನು ಮೊದಲ ಸಲ ಕಲಿತಂದಿನಿಂದ ನಾನೂ ಈ ಕೊಲೆಯ ಒಳಸಂಚಿನಲ್ಲಿ ಭಾಗಿದಾರ ಎನಿಸತೊಡಗಿದೆ ಎಂದು ತಿಳಿಸುತ್ತದೆ. ಇಲ್ಲಿಯ ಸಮಸ್ಯೆಗಳೊಂದಿಗೆ ಸದಾ ಸಂವಾದ ತೊಡಗುವ ಕವಿಯ ಸಮಷ್ಠಿ ಬದುಕನ್ನು ಅರ್ಥಪೂರ್ಣವಾಗಿ ಇಲ್ಲಿ ಚಿತ್ರಿಸುತ್ತಾನೆ. ಪಂಜಾಬಿನ ಅಂದಿನ ಹಿಂಸಾ ಪ್ರವೃತ್ತಿಯನ್ನು ಕಂಡು ಆ ಕವಿಯು ಅದರ ನಾಗರಿಕನೆಂದು ಹೇಳಿಕೊಳ್ಳಲು ನಾಚಿಕೆ ಪಟ್ಟುಕೊಳ್ಳುತ್ತಾನೆ.

ಇದನ್ನು ಯಾವ ಹೆಸರಿನಿಂದಲೂ ಕರೆಯಬಹುದು  
ಗುಂಡಾರಾಜ್ಯವೆಂದಾದರೂ, ಇದರ ನಾಗರಿಕ  
ಎನಿಸಿಕೊಳ್ಳಲು ನಾನು ನಾಚಿಕೆ ಪಟ್ಟುಕೊಳ್ಳುತ್ತೇನೆ

ಈ ಪದ್ಯದಲ್ಲಿ ಕವಿಯು ಪಂಜಾಬ ಅನುಭವಿಸಿದ ನೋವನ್ನು ಹೀರಿಕೊಂಡು ಅದನ್ನು ಕಾವ್ಯಮಯವಾಗಿ ಹಿಡಿದಿಟ್ಟುರುವದನ್ನಿಲ್ಲಿ ಗುರುತಿಸಬಹುದಾಗಿದೆ. ತಾನು ಆ ಪಾಯಲಟ್‌ನ ಮೋಸದ ಕಣ್ಣುಗಳಲ್ಲಿ ಇರಿಯುವ ಭಾರತವಾಗಿರುವುದನ್ನು ತಿಳಿಸುತ್ತಾನೆ. ಒಂದು ವೇಳೆ ಅವರ ವಂಶ ಪಾರಂಪರ್ಯದ ಭಾರತಯೊಂದಿದ್ದರೆ ಆ ದೇಶದಿಂದ ತನ್ನ ಹೆಸರನ್ನು ಬೇಗ ಹೊಡೆದು ಹಾಕಲು ನಿವೇದನೆ ಮಾಡಿಕೊಂಡಿರುವುದನ್ನಿಲ್ಲಿ ಕಾಣಬಹುದು.

ಪಂಜಾಬದ ರಕ್ತರಂಜಿತ ವಾಸ್ತವಿಕತೆಯನ್ನು ಅಲ್ಲಿಯ ಕವಿಗಳು ಸ್ವತಃ ಕಂಡು ಉಂಡಿದ್ದಾರೆ. ಮನುಷ್ಯನ ಸಂವೇದನಾ ಶೀಲತೆಯನ್ನು ಸಾಕಾರಗೊಳಿಸಿ ತೋರಿಸುವ ಸುರಜೀತ ಪಾತ್ರರ ಮೂಲಕವಿತೆ ಇಲ್ಲಿ ಮನೆಗಳಿಗೆ ಹಿಂತಿರುಗುವದು ಹೇಗೆ? ಎಂದು ಅಂಬಲಗೆಯವರಿಂದ ಭಾಷಾಂತರ ಗೊಂಡಿದೆ. ಸಾಧ್ಯವಾದಷ್ಟು ಮೂಲ ಕವನದ ಭಾವಗಳನ್ನು ಉಳಿಸಿಕೊಂಡು ಬಿಂಬಿತವಾಗಿರುವ ಇದು ಗಮನಾರ್ಹ ಕವನವಾಗುತ್ತಿದೆ.

ಹಣೆಯ ಮೇಲೆ ಸಾವು ಹಸ್ತಾಕ್ಷರ ಹಾಕಿದೆ[೩]  
ಮುಖದ ಮೇಲೆ ಗೆಳೆಯನ ಹೆಜ್ಜೆಗುರುತು ಮೂಡಿದೆ  
ದರ್ಪಣದಲ್ಲಿ ಮತ್ತಾರೋ ಇಣುಕುತ್ತಿದ್ದಾರೆ  
ಕಣ್ಣಲ್ಲಿ ರಸಹೀನ ಹೊಳಪಿದೆ, ಯಾವುದೋ  
ಬಿದ್ದ ಮನೆಯ ಮಾಳಿಗೆಯ ಬಿಸಿಲಿನಂತೆ

ಯಾವುದೇ ಮಾಟಗಾರ್ತಿಯ ಮಂತ್ರದಿಂದಲೋ ಅಥವಾ ಯಾವುದೋ ಸಾಧುವಿನ ಶಾಪದಿಂದಲೋ ತನ್ನ ಮಗನು ತನಗಿಂತ ವಯಸ್ಸಾದವನಂತೆ ಕಾಣುತ್ತಿದ್ದಾನೆ. ಎನ್ನುತ್ತ ತಾಯಿ ಭಯ ಬೀಳುವುದು ಇಲ್ಲಿಯ ಸಾಮಾನ್ಯ ದೃಶ್ಯವಾಗಿತ್ತು.

ತನ್ನ ಕಣ್ಣಾರೆ ದುಃಖಾಂತಗಳನ್ನು ಕಂಡ  
ತನ್ನ ಹೆಣವನ್ನೆ ತಾಹೊತ್ತ ಮನುಷ್ಯ!

---

೩. ಸಮಕಾಲಿನ ಪಂಜಾಬಿ ಕವಿತೆಗಳು – ಮನೆಗಳಿಗೆ ಹಿಂತಿರುಗುವದು ಹೇಗೆ? ಪು.ಸಂ. ೪– ೧೯೯೪

ಪತಿಯ ಹೊಸ ಚಿತ್ಕಾರದ ಮೇಲೆ ಮಾಂಸ!!
ಬೇಯಿಸುವ ಹೆಮ್ಲೇಟನ ತಾಯಿ

ಚಳಿಯಲ್ಲಿ ಮನುಷ್ಯನ ಚಿತೆಯಲ್ಲಿ
ಕೈ ಕಾಯಿಸಿ ಕೊಳ್ಳುವ ಈ ಈಶ್ವರ!!![೪]

ಎಂಬಂತಹ ಸಾಲುಗಳು ಅಲ್ಲಿಯ ಜೀವನದ ಟ್ರಾಜಿಡಿಯಲ್ಲಿ ಮುಳುಗಿದ ಮನುಷ್ಯರ ಮಾನಸಿಕತೆಯನ್ನು ಹೇಳಲು ಪ್ರಯತ್ನಿಸಿವೆ.

ನನ್ನ ಬಾಲ್ಯದ ಭಾವಚಿತ್ರಕ್ಕೆ
ನನ್ನ ತಮ್ಮನ ಕಣ್ಣಲ್ಲಿ ಕಣ್ಣಿಟ್ಟು
ನಾನು ನೋಡುವುದಾದರೂ ಹೇಗೆ?[೫] ಎಂಬಂತಹ ಪ್ರಶ್ನೆಗಳು

ಅಳುವುದನ್ನೇ ಮರೆತಿದ್ದೇನೆ ಬೇರೆ ಕೋಟಿನ ಜೇಬಿನಲ್ಲಿಯೇ ಕಣ್ಣೀರು ಉಳಿದು ಬಿಟ್ಟಿದೆ ಎಂಬುದನ್ನು ನೆನೆಸುತ್ತೇನೆ ಹಾಗೂ ಹಳೆಯ ಗೆಳೆಯರು ಬೆಟ್ಟಿಯಾದರೆ ಎಂದೋ ಸತ್ತು ಹೋದ ಪ್ರೀತಿ ಪ್ರೇಮಗಳು ಬಹಳಷ್ಟೇ ನೆನಪಾಗುತ್ತವೆ. ಎಂಬಂತಹ ಹೇಳಿಕೆಗಳು ಆ ಕಾಲ ಘಟ್ಟದಲ್ಲಿ ಮನುಷ್ಯನು ನಿಂತ ಸಂಘರ್ಷದ ಬದುಕಿನ ನೆಲೆಗಳನ್ನು ತೋರಿಸುತ್ತವೆ.

ಈಗ ಮನೆಗಳಲ್ಲಿರುವದು ಸುಲಭವಲ್ಲ!
ಹಣೆಯ ಮೇಲೆ ಸಾವು ಹಸ್ತಾಕ್ಷರ ಹಾಕಿದೆ

ಹಾಗಾಗಿ ಈಗ ಮನೆಗಳಿಗೆ ಹಿಂತಿರುಗುವದು ಸಾಧ್ಯವಿಲ್ಲ. ನಮ್ಮನ್ನು ಯಾರೂ ಗುರುತಿಸುವದಿಲ್ಲವೆನ್ನುವಲ್ಲಿ ಅಂತಹ ವಾಸ್ತವಿಕತೆಯನ್ನು ಈ ಕವಿತೆಗಳು ಕಾವ್ಯಮಯವಾಗಿಯೋ ಕಟ್ಟಿ ಕೊಟ್ಟಿವೆ ಎನ್ನಬಹುದು. ಅಂತೆಯೇ ಡಾ. ಅಂಬಲಗಿಯವರು ಅನುವಾದದ ಶೈಲಿಯೂ ಅದನ್ನು ಉಳಿಸಿಕೊಂಡು ಅಭಿವ್ಯಕ್ತವಾಗುವಲ್ಲಿ ಸಫಲ ಕಂಡಿರುವದು ಗಮನಾರ್ಹ ಅಂಶವಾಗಿದೆ.

ಪಂಜಾಬನ್ನು ಕುರಿತ ಸುರಜೀತ್ ಪಾಶಾರ ಮಿನಿ ಕವಿತೆಯೊಂದು ಹೇಳುವ ರೀತಿ ಹೀಗಿದೆ.

ಪ್ರತಿ ತಲೆಮಾರೂ ಇತಿಹಾಸ ಬರೆಯುತ್ತದೆ.
ಪ್ರತಿ ಸಲವೂ ಜೀವಂತ ಶವಗಳ ನ್ಯಾಯಾಲಯದಲ್ಲಿ
ಹೂತ ಹೆಣಗಳ ಅಸ್ಥಿಪಂಜರಗಳು ಹಾಜರು ಪಡಿಸಲಾಗುವುವು
ಕೆಲವು ಸಲ ಹೂಮಾಲೆ ಹಾಕಲು
ಮತ್ತೆ ಮುಳ್ಳಿನ ಮಾಲೆ ತೊಡಿಸಲು

---

೪. ಪಂಜಾಬಿನ ಕವಿತೆಗಳು – ಮನೆಗಳಿಗೆ ಹಿಂತಿರುಗುವುದು ಹೇಗೆ ? ಪು.ಸಂ. ೫ – ೧೯೯೪
೫. ಪಂಜಾಬಿನ ಕವಿತೆಗಳು – ಮನೆಗಳಿಗೆ ಹಿಂತಿರುಗುವುದು ಹೇಗೆ ? ಪು.ಸಂ. ೫

ಸಮಯ ಎನ್ನುವುದು
ಅಂತಿಮ ನ್ಯಾಯಾಲಯವೇನಲ್ಲ
ಇತಿಹಾಸ ಎನ್ನವದು
ಅಂತಿಮವಾಗಿ ಬರೆಯಲಾಗುವದಿಲ[೬]

ಇಲ್ಲಿಯ ಕವಿತೆಗಳು ಇತಿಹಾಸ ಬರೆಯಲು ಹೊರಟಿಲ್ಲ ಆದರೆ ಜಗತ್ತಿನಲ್ಲಿ ನಿಜವಾಗಿಯೂ ನಿಜವಾದ ಇತಿಹಾಸ ಬೆರೆಯದು ಇತಿಹಾಸ ಕವಿತೆಗಳೆಂದಲೇ ಎನ್ನುವದು ಅಷ್ಟೇ ಸತ್ಯವಾಗಿದೆ. ಈ ಲಕ್ಷಣಗಳು ಇಲ್ಲಿನ ದಶಕದ ಕವಿತೆಗಳು ತನ್ನಲ್ಲಿ ಹುದುಗಿಸಿಕೊಂಡಿವೆ ಎನ್ನುವುದು ಅಂಬಲಗೆಯವರ ಖಚಿತ ಪ್ರತಿಕ್ರಿಯೆಯಾಗಿದೆ[೭] ಪಂಜಾಬಿನ ಸ್ಥಿತಿ ಸರಿಯಾಗಿದೆ ಎಂದು ಬೇರೆಯವರು ತಿಳಿಸಿದರೂ ಅದನ್ನು ನಂಬುತ್ತಿರಲಿಲ್ಲ. ಪಂಜಾಬಿನ ಪ್ರಜೆ ಎಂಬುದರ ಚಿತ್ರವನ್ನು ಸತಿಂದರ್ ಸಿಂಹನೂರ್ ಅವರ ಕೃತಿಯ ಅನುವಾದ ಲಾಹೋರ ರಸ್ತೆ ಎಷ್ಟು ಸಹಜವಾಗಿ ತಿಳಿಸುತ್ತದೆ ಇಲ್ಲಿ

ಲಾಹೋರಿನ ರಸ್ತೆಯ ಮೇಲೆ
ನಾನು ಹೋಗುತ್ತಿರುವಾಗ
ಪಂಜಾಬಿ ಮುದುಕಿಯೋರ್ವಳು
ನನ್ನನ್ನು ತಡೆದು ಬುರ್ಖಾ ಸರಿಸಿ
ಕೇಳುತ್ತಾಳೆ:ಮಗ: ಪಂಜಾಬಿನ ಸ್ಥಿತಿ ಹೇಗಿದೆ?
ನಾನು ಉತ್ತರಿಸುತ್ತೇನೆ
ಎಲ್ಲವೂ ಸರಿಯಾಗಿಯೇ ಇದೆಯಲ್ಲ ಅಮ್ಮ
ಪಂಜಾಬಿ ಮುದುಕಿಯೆನ್ನುತ್ತಾಳೆ
ಅಲ್ಲ ಮಗ !
ಇಷ್ಟೊಂದು ಸುಳ್ಳು ಯಾಕೆ ಹೇಳುತ್ತಿ[೮]

ಈ ದಶಕದಲ್ಲಿ ಪಂಜಾಬ ಅನುಭವಿಸಿದ ನೋವನ್ನು ಅನುಭವಿಸಿದವರು ಆ ಭಯದ ವಾತಾವರಣದಿಂದ ಹೇಗೆ ಮುಕ್ತರಾಗಿಲ್ಲ ಎಂಬುದನ್ನು ಇಲ್ಲಿಯ ಅನುವಾದವು ಮೂಲ ಭಾವನೆಯಂತೆಯೇ ಅಭಿವ್ಯಕ್ತಗೊಂಡಿರುವುದನ್ನು ಕಾಣಬಹುದಾಗಿದೆ.

ಪಂಜಾಬಿನ ಈ ಮಣ್ಣು ಇಂಥ ಯಾವ ನೋವನ್ನು ತನ್ನಲ್ಲಿ ಹುದುಗಿಸಿಕೊಂಡಿತ್ತೋ ಅದನ್ನು ಎಲ್ಲರೊಂದಿಗೆ ಹಂಚಿಕೊಂಡಿತ್ತು ಅಷ್ಟೇ ಅಲ್ಲ ಆ ನೋವನ್ನು ತೊಡೆಯುವಲ್ಲಿಯೂ ನಿರಂತರ ಪ್ರಯತ್ನ ಸಾಗಿತ್ತೆಂಬುದನ್ನು ಇಂಥ

---

೬. ಸಮಕಾಲೀನ ಪಂಜಾಬಿ ಕವಿತೆಗಳು – ಪು.ಸಂ. ೭ ೧೯೯೪

೭. ಸಮಕಾಲೀನ ಪಂಜಾಬಿ ಕವಿತೆಗಳು – ಮುನ್ನುಡಿಯಲ್ಲಿ ಪುಟ ಸಂ. IV ೧೯೯೪

೮. ಸಮಕಾಲೀನ ಪಂಜಾಬಿ ಕವಿತೆಗಳು – ಲಾಹೋರ ರಸ್ತೆ ಪು.ಸಂ. ೮ ೧೯೯೪

ಅನುವಾದಗಳು ದಾಖಲಾಗಿಸುತ್ತವೆ. ಇಲ್ಲಿಯ ಈ ನೋವಿನ ಸಂಗತಿಯನ್ನು ತುಂಬಿಕೊಂಡು ಹೇಳಿರುವ ಮಾತುಗಳೆಲ್ಲ ಕಾವ್ಯಮಯವಾಗಿ ಹೊರಹೊಮ್ಮಿರುವದು ಪ್ರಮುಖವಾಗಿರುವ ಅಂಶವೆನ್ನಬಹುದು.

ನನ್ನ ಸಮಾಧಿಯ ಮೇಲೆ
ಜ್ಯೋತಿ ಬೆಳಗುವುದೆಂದು
ಬಹುಶಃ ನನ್ನ ಭ್ರಮೆಯೇ ಆಗಿರಬಹುದು
ಹಾಂ! ಸಮಾಧಿಗಳು ಹೀಗೆ
ಹೊಳೆಯುವವಾದರೆ
ಎಲ್ಲ ಮನೆಗಳ ಜ್ಯೋತಿ
ನಂದಿ ಹೋಗಿರುವವ[೯]

ಎನ್ನುವಲ್ಲಿ 'ಕಾವ್ಯತ್ವ' ಕೆನೆಗಟ್ಟಿ ನಿಂತಿರುವುದನ್ನು ಗುರುತಿಸಬಹುದು ಇಲ್ಲಿ ಡಾ. ಅಂಬಲಗೆಯವರ ಪದ ಜೋಡಣೆಯು ಸುಂದರವಾಗಿದ್ದು ಮೂಲಭಾವಕ್ಕಿಂತ ಚಿತ್ತಾಕರ್ಷಕವಾಗಿರುವುದು ಎದ್ದು ಕಾಣುತ್ತದೆ. ಪಂಜಾಬಿನ ಆ ನೋವಿನ ವಾತಾವರಣದಲ್ಲಿ ದಿನಗಳ ಎಣಿಕೆ ಅಥವಾ ದಿನಗಳನ್ನು ಮುಂದೂಡುವದೇ ಕಷ್ಟ ಸಾಧ್ಯವಾಗಿತ್ತು. ಮನೆಯಲ್ಲಿಯೇ ಹೆದರಿ ಬಾಗಿಲು ಮುಚ್ಚಿಕೊಂಡು ಕುಳಿತು ದಿನಗಳನ್ನು ಕಳೆದ ಸ್ಥಿತಿಯ ಚಿತ್ರಣ ಮನೋಜ್ಞವಾಗುತ್ತದೆ.

ಆಕಸ್ಮಿಕವಾಗಿ ಕೆಲವು ದಿನಗಳು
ಕ್ಯಾಲಂಡರಿನಿಂದ ಮಾಯವಾದವು
ಅವು ಒಂದೊಂದಾಗಿ ಹಿಂತಿರುಗಿದಾಗ
ನಾನು ಕೇಳಿದೆ
ತಾವು ಎಲ್ಲಿಗೆ ಹೋಗಿದ್ದೀರಿ?
ನನಗೆ ಬಹಳ ಆಶ್ಚರ್ಯವಾಯಿತು[೧೦]

ಎಂಬಂತಹ ನುಡಿಗಳಲ್ಲಿ ಹುದಗಿರುವ ಕಳೆದ ದಿನಗಳು ಆ ವಾತಾವರಣ ಉಸಿರುಗಟ್ಟಿಸಿದ ಸ್ಥಿತಿ ನಚಿತರದಲ್ಲಿ ತಿಳಿಯಾದ ಸಾಮಾಜಿಕ ಜೀವನವನ್ನು ಕೆಲವು ಮಾತುಗಳಲ್ಲಿ ವಿವರವಾಗಿ ತಿಳಿಸುತ್ತದೆ. ಇದನ್ನೇ ಉತ್ತಮವಾದ ಅನುವಾದದ ಲಕ್ಷಣವೆನ್ನಬಹುದು. ಡಾ. ಅಂಬಲಗೆಯವರ ಈ ಪ್ರಜ್ಞೆ ಜಾಗ್ರತವಾಗಿದ್ದು ಅದು ಅನುವಾದ ಕ್ರಿಯೆಯಲ್ಲಿ ಸದಾ ಉಳಿದು ಕೊಂಡು ನಿಂತಿರುವುದನ್ನು ನಾವಿಲ್ಲಿ ಅನೇಕ

---

೯. ಸಮಕಾಲೀನ ಪಂಜಾಬಿ ಕವಿತೆಗಳು – 'ಪಂಜಾಬ' ಪು.ಸಂ. ೭ ೧೯೯೪

೧೦. ಸಮಕಾಲೀನ ಪಂಜಾಬಿ ಕವಿತೆಗಳು 'ಕ್ಯಾಲಂಡರಿನಿಂದ ಮಾಯವಾದ ದಿನಗಳು' ಪುಟ ಸಂ ೮ ೧೯೯೪

ಕಡೆಗಳಲ್ಲಿ ಗುರುತಿಸಬಹುದು. ಕಾವ್ಯದ ಭಾಷಾಂತರದ ಬಗ್ಗೆ ಹೇಳಬೇಕೆಂದರೆ ಅದು ತರಿಸುವ ಗಾಳಿಯ ಪಿಸುಮಾತುಗಳನ್ನು ಕೇಳಿ ಅನುವಾದಿಸಿದಂತೆ ಎಂಬ ಹೇಳಿಕೆಯೊಂದಿಗೆ[೧೧] ಅಂದರೆ ಭಾಷಾಂತರ ಕೈಕೊಳ್ಳಬೇಕಾದರೆ ಭಾಷೆಯ ಮೇಲೆ ಪ್ರಭುತ್ವ ಮತ್ತು ಸಾಹಿತ್ಯದ ಸಂವೇದನೆ ಒಂದು ಸಾಧಾರಣ ಭಾಷಾಂತರಕ್ಕೂ ಅತ್ಯವಶ್ಯವಾಗಿರಬೇಕು. ಅನುವಾದದಲ್ಲಿ ಕೇವಲ ನಿಯಮಗಳನ್ನು ಪಾಲಿಸಬಾರದು ಅನುವಾದಕ ಅದರಲ್ಲಿ ಕಾವ್ಯದ ಸೌಂದರ್ಯದ ಅನುಭೂತಿ ಮತ್ತು ಕಲ್ಪನೆಯನ್ನು ಸೃಷ್ಟಿಸಬೇಕು. ಮೂಲಕೃತಿಯನ್ನು ಅಂಧಾನುಕರಣೆಯಿಂದ ಅನುವಾದಿಸುವುದು ಆತನ ಕೆಲಸವಾಗಬಾರದು. ಮೂಲ ಕೃತಿಕಾರನ ಭಾರವನ್ನು ಅನುವಾದದಲ್ಲಿ ಇಳಿಸಬೇಕು. ಈ ದೃಷ್ಟಿಯಿಂದ ವಿಚಾರಿಸಿದರೆ ಕವಿ ಹೃದಯದ ಅಂಬಲಗೆಯವರಿಗೆ ಕಾವ್ಯಾನುವಾದ ಕ್ರಿಯೆ ಸಿದ್ಧಿಸಿದೆ ಎಂದು ಹೇಳಬಹುದು.

ಅಪಾರವಾದ ಸ್ಪಂದನಶೀಲವುಳ್ಳ ಪಂಜಾಬಿ ಕವಿಗಳು ಸದಾ ಲೇಖನಿಯನ್ನು ತೆರೆದಿಟ್ಟುಕೊಂಡು ಕ್ರಿಯಾಶೀಲರಾದವರು, ದಿನ ರಾತ್ರಿ ಸಾವು, ನೋವುಗಳ ಸುದ್ದಿ ಕೇಳಿ ಅದನ್ನು ಒಪ್ಪಿಕೊಂಡವರಂತೆ ಜಡವಾಗಿ ಬದುಕುತ್ತಿರುವ ಇತರ ಭಾರತೀಯರಂತಲ್ಲ ಅವರು ಸಾಯಲು ಸಿದ್ದರಾಗಿದ್ದುಕೊಂಡೇ ಹಿಂಸಾ ಪ್ರವೃತ್ತಿಯನ್ನು ಸಾರಸಗಟಾಗಿ ತಿರಸ್ಕರಿಸುವ ಮನಸ್ಸಿನವರು ಇವರು ಕಾವ್ಯಕಟ್ಟಿ. ಆಮೂಲಕ ಇಲ್ಲಿ ನೇರವಾಗಿ ಸಾವು–ನೋವುಗಳೊಂದಿಗೆ ಸಂವಾದಕ್ಕಿಳಿದಿದ್ದಾರೆ ಅವರ ಆ ಭಾವಗಳನ್ನು ಡಾ. ಅಂಬಲಗೆಯವರು ಅಷ್ಟೇ ಪರಿಣಾಮಕಾರಿಯಾಗಿ ಅನುವಾದಿಸಿದ್ದಾರೆ. ಪಂಜಾಬಿಗೆ ಬಿದ್ದ ಬೆಂಕಿಯ ಸ್ವರೂಪವನ್ನು ಇಲ್ಲಿ ನೋಡಬಹುದು ___

ಬೆಂಕಿ ಕೇವಲ ಬದುಕಲಿಕ್ಕಾಗಿ ಮಾಡಲಾಗಿತ್ತು
ಉದಾಹರಣೆಗೆ – ರೊಟ್ಟಿ ಬೇಯಿಸಿಕೊಳ್ಳಲು
ಚಳಿಯಿಂದ ನಡುಗುವಾಗಿ ಮೈ ಕಾಸಿಕೊಳ್ಳು
ಆದರೆ ಈಗ
ಮನುಷ್ಯನೆಷ್ಟು ಆಶೆಬುರುಕನಾಗಿರುತ್ತಾನೆ?
ಯಾರಿಗೇ ಆಗಲಿ ಎಲ್ಲಿಯೇ ಆಗಲಿ
ಬೆಂಕಿ ಹಚ್ಚಲು ಬೆಂಕಿಯುಪಯೋಗ
ಎಷ್ಟೊಂದು ಸುಲಭವಾಗಿ ಮಾಡುತ್ತಾನೆ[೧೨]



ಇಂದು ಜನರಲ್ಲಿ ತುಂಬಿ ನಿಂತಿರುವ ದುರಾಸೆ ಮತ್ಸರ ಭಾವದ ಪ್ರಕಟಣೆಯ ಚಿತ್ರಣ ಈ

---

೧೧. 'ನಮ್ಮ ಅನುವಾದಕ' ಪ್ರೊ. ಆರ್.ಎಂ. ಸಾಸನೂರ ಪುಟ ಸಂ. ೭೮
೧೨. ಸಮಕಾಲೀನ ಪಂಜಾಬಿ ಕವಿತೆಗಳು – ಪುಟ ಸಂ. ೫೭

ಕವನದಲ್ಲಿ ಮಡುಗಟ್ಟಿ ನಿಲ್ಲುತ್ತದೆ. ಅಂತೆಯೆ ಈ ಬೆಂಕಿಯನ್ನು ಮನೆಗೆ ಬಿದ್ದಾಗ ಆರಿಸಬಹುದು ಊರಿಗೆ ಬಿದ್ದಾಗಲೂ ಇದನ್ನು ಶಮನಗೊಳಿಸುತ್ತಾನೆ ಮನುಷ್ಯ ಒಂದು ವೇಳೆ

ಬೆಂಕಿ ಇಡೀ ಕಾಡಿಗೆ ಬಿದ್ದರೆ, ಆತ ಆರಿಸುತ್ತ ಆರಿಸುತ್ತ ತಾನೂ ಕೂಡ ______? ಅಲ್ಲಿಯೇ ಆರಿ ಹೋಗುವುದನ್ನು ಅವರ ಬೆಂಕಿ – ೨ ಮಿನಿಗವನ ತಿಳಿಸುತ್ತದೆ.

ಬದುಕನ್ನು ಬದುಕುವದಕ್ಕಾಗಿ ಅಥವಾ ಅದನ್ನು ಅರ್ಥಪೂರ್ಣಗೊಳಿಸಿಕೊಳ್ಳುವದಕ್ಕಾಗಿ ಮೂಲಭೂತವಾದದ ಹೊಲಸನ್ನು ತೊಳೆದುಕೊಳ್ಳಬೇಕಾಗುತ್ತದೆ. ನಿಜ ಬದುಕಿನ ದಾರಿಯನ್ನು ತಪ್ಪಿಸುವ ಹಲವು ಕುತಂತ್ರ ಬದುಕಿನ ದಾರಿ ತಪ್ಪಿಸುವ ಪ್ರಮುಖ ಕೊಳಕುತನಗಳಲ್ಲಿ ಧರ್ಮವೂ ಒಂದಾಗಿದ್ದು ಅದನ್ನು ಅರಿತಿರುವ ಸಮಾಜವಾದಿ ಮನಸ್ಸಿನ ಕವಿಯ 'ರಾಮಸಿಂಹ ಚಾಹಲ'ರ ಒಂದು ಮಿನಿಗವಿತೆಯನ್ನು ಅಂಬಲಗೆಯವರು 'ಧರ್ಮ' ವೆಂಬ ನಾಮದಲ್ಲಿ ಅನುವಾದಿಸಿದ್ದು ಹೀಗಿದೆ.

ಅವನು ಎಷ್ಟೋಸಲ ಘೋಷಿಸಿಬಿಟ್ಟಿದ್ದಾನೆ
ತನಗೆ ಯಾವುದೇ ಧರ್ಮ ಇಲ್ಲ ಎಂದು
ಊರ ಜನರೆಲ್ಲ ಅವನಿಗೆ ನೀತಿ ನಿಯಮಗಳ
ಆದರ್ಶ ಮನುಷ್ಯನೆಂದು ಕರೆಯುತ್ತಾರೆ _ _ _
ಆದರೆ ಈಗ ಅವನು ಪೇಟ ಕಟ್ಟಿ ಅಥವಾ ಬಿಟ್ಟು
ನಡೆಯುತ್ತಾನೆ ಆದ್ದರಿಂದ ಅವನು ಒಂದಿಲ್ಲ ಒಂದು
ಧರ್ಮಕ್ಕೆ ಸೇರಿಬಿಡುತ್ತಾನೆ ಅಥವಾ ಸೇರಿಸಲ್ಪುಡುತ್ತಾನೆ
ಮುಂದಿನ ಕ್ಷಣವೇ ಅವನು ವಿಚಾರಿಸತೊಡಗುತ್ತಾನೆಃ
ಈಗ ಇಲ್ಲಿ ತಲೆ ತಗೆದಿಟ್ಟು ನಡೆಯುವದೇ ಉತ್ತಮ ಎಂದು[೧೩]

ತನಗೆ ಯಾವುದೇ ಧರ್ಮ ಇಲ್ಲ ಎಂದು ಘೋಷಿಸುವ ವಾಸ್ತವಿಕ ಪ್ರಜ್ಞೆಯುಳ್ಳ ಮನುಷ್ಯನ ಬದುಕು ಇಲ್ಲಿ ವ್ಯಕ್ತವಾಗಿದ್ದು ಅದು ಪ್ರಜ್ಞಾವಂತರ ವ್ಯಕ್ತಿಯೋರ್ವನು ಬದುಕಲು ಆಲೋಚಿಸುವ ರೀತಿಯನ್ನು ತಿಳಿಸುತ್ತದೆ. ಇದರಂತೆ ವಾಸ್ತವಿಕ ಬದುಕಿನ ಟ್ರಾಜಿಡಿಯಲ್ಲಿ ಮುಳುಗಿದ ಮನುಷ್ಯನ ಮಾನಸಿಕತೆಯನ್ನು ಇನ್ನೂ ಹಲವು ಕವನಗಳು ಹೇಳಲು ಪ್ರಯತ್ನಿಸಿವೆ. ಶ್ರೀಮತಿ ಪಾಲಕಾರ ಅವರ ಕವನದ 'ಅನುವಾದ' ವಾಗಿರುವ 'ಸ್ವೀಕಾರದ' ನಂತರ ಕವನ ಎಷ್ಟೊಂದು ಅರ್ಥಪೂರ್ಣವಾಗಿದೆ.

---

೧೩. ಸಮಕಾಲೀನ ಪಂಜಾಬಿ ಕವಿತೆಗಳು – ಧರ್ಮ – ಪುಟ ಸಂ. ೫೬

ಬಂಗಾರದಂಗಡಿಯವನೆನ್ನುತ್ತಾನೆ
ಆಭರಣಗಳ ವ್ಯಾಕರಣದಲ್ಲಿ
ಶುದ್ಧ ಎನ್ನುವ ಶಬ್ದ ವ್ಯರ್ಥ
ಏನೇ ಆಭರಣ ಮಾಡಬೇಕಾದರೂ
ಒಂದಿಷ್ಟು ಕಲಬೆರಕೆ ಮಾಡಲೇಬೇಕಾಗುತ್ತದೆ[೧೪]

ಈ ಕಾಲಘಟ್ಟದಲ್ಲಿ ಮನುಷ್ಯನು ನಿಂತ ಸಂಘರ್ಷದ ನೆಲೆಗಳನ್ನು ಎತ್ತಿ ತೋರಿಸುವ ಈ ಕವನದ ಮೂಲಭಾವನೆಯೂ ಯಥಾರ್ಥವಾಗಿ ಭಾಷಾಂತರಗೊಂಡಿದೆ. ಸಂಘರ್ಷದ ನೆಲೆಗಳ ಸೂಕ್ಷ್ಮತೆಯನ್ನು ಒಳ ಅರ್ಥದಲ್ಲಿ ತೋರಿಸುವ ಈ ಕವನ ಅಂಬಲಗೆಯವರ ಅತ್ಯುತ್ತಮ ಅನುವಾದ ಕವಿತೆಗಳಲ್ಲಿ ಒಂದಾಗಿದೆ.

ಶುದ್ಧ ಬಂಗಾರ ತೆಗೆದುಕೊಂಡು ಏನಾಗಬೇಕಾಗಿದೆ?
ನಮಗೊಂದು ಕೃತಿ ಮಾತ್ರ ಬೇಕು
ಸೃಜನಶೀಲತೆಯ ಆಭರಣಬೇಕು
ಬಂಗಾರದಲ್ಲಿ ತಾಮ್ರ ನಮ್ಮ ಮನಸ್ಸೇ ಸ್ವೀಕರಿಸಿದೆ
– – – ಮತ್ತೆ ಸ್ವೀಕರಿಸುತ್ತಲೇ ಇದೆ –

ಎಂದು ವಿಶ್ವ ಬದುಕಿನ ವಿವರಣೆಗೆ ತೊಡಗುವ ಕವಿಯು ನಂತರದಲ್ಲಿ ಆ ಜೀವನಕ್ಕೆ ಮೌಲ್ಯ ಸಿಗದೆ ಬತ್ತಲೆಯಾಗುಳಿಯುವ ಸ್ಥಿತಿಯನ್ನು –

ಆಭರಣ ಉಪಯೋಗಿಸುತ್ತ ಹೋದಂತೆ
ನಡುನಡುವೆ ತಾಮ್ರ ಇಣುಕತೊಡಗಿದೆ
ನಾವು ಅಂದುಕೊಂಡೆವು ಇರಲಿಬಿಡು
ಏನಾದರೂ ಆಭರಣವೇ ಅಲ್ಲವೇ? ಎಂದು
ಬಂಗಾರ ಸಾವಕಾಶವಾಗಿ ಸವೆಯತೊಡಗಿದೆ
ಈಗ ಕೇವಲ ತಾಮ್ರ ಮಾತ್ರ ಉಳಿದುಬಿಟ್ಟಿದೆ

ಎಂಬಂತಹ ಸಾಲುಗಳಲ್ಲಿ ವ್ಯಕ್ತವಾಗುತ್ತದೆ. ಆದರೆ ಈ ತಾಮ್ರವನ್ನೇ ಆಭರಣವೆಂದು ಭ್ರಮಿಸಿ ಅಲಂಕರಿಸಿಕೊಳ್ಳುವುದಾಗಲಿ ಉಳಿದ ತಾಮ್ರದಲ್ಲಿ ಬಂಗಾರ ಹುಡುಕುತ್ತ ನೋವು ಅನುಭವಿಸುವ ಸ್ಥಿತಿಯಾಗಲಿ ಇರಬಾರದೆಂಬುದು ಕವಿಯ ಆಶಯ ಅದು ಅನುಭಾವ ಸಾಹಿತ್ಯದಲ್ಲೂ ಹರಿದು ಬಂದಿತ್ತು. ಅನುವಾದದ ಸೃಜನಾತ್ಮಕತೆಗೆ ನಿದರ್ಶನವಾಗಿ ನಿಲ್ಲುತ್ತದೆ.

---

೧೪. ಸಮಕಾಲೀನ ಪಂಜಾಬಿ ಕವಿತೆಗಳು – ಸ್ವೀಕಾರದ ನಂತರ – ಪುಟ ಸಂ. ೬೦

ಒಳ್ಳೆಯ ಭಾಷಾಂತರಕ್ಕೆ ಮೂಲದಷ್ಟೇ ಬೆಲೆ ಇರುತ್ತದೆ ಅದನ್ನು ಓದುವದು ಸುಲಭ ಬರೆಯುವದು ಕಷ್ಟ ಉದ್ಗ್ರಂಥಗಳನ್ನು ಮೂಲದಲ್ಲಿಯೇ ಎಲ್ಲರು ಓದುವುದು ಅಸಾಧ್ಯ. ಆದ್ದರಿಂದ ಅವುಗಳನ್ನು ಚೆನ್ನಾಗಿ ಭಾಷಾಂತರ ಮಾಡಿಕೊಡುವ ವಿದ್ವಾಂಸರ ಉಪಕಾರ ದೊಡ್ಡದು ಭಾಷಾಂತರವು ತೃಪ್ತಿಕರವಾಗಿದ್ದಲ್ಲಿ ಮೂಲವನ್ನು ನಾವು ಓದಲಿಲ್ಲ ಎಂದು ಚಿಂತಿಸುವ ಕಾರಣವಿಲ್ಲ. ಎಂಬ ಹೇಳಿಕೆಯಂತೆ[೧೫] ಡಾ. ಅಂಬಲಗೆಯವರ ಉಪಕಾರ ದೊಡ್ಡದು ಎನ್ನಬಹುದು.

ಬದುಕಿನಲ್ಲಿ ಸುರಕ್ಷತೆಗಾಗಿ ಹೋರಾಟ ಮಾಡುವ ಮನುಷ್ಯನ ಮನಸ್ಸಿನ ಯಾವುದೋ ಒಂದು ಮಾತಿನಲ್ಲಿ ಹಿಂಸಾ ಮತ್ತು ಆಕ್ರಮಣಕಾರೀ ಪ್ರವೃತ್ತಿ ಮಲಗಿರುತ್ತದೆ. ಅದು ಸಂದರ್ಭಕ್ಕನುಗುಣವಾಗಿ ಎಚ್ಚೆತ್ತುಕೊಳ್ಳುತ್ತದೆ. ಹೀಗಾಗಿ ಅವನ ಎಲ್ಲ ಮಾನಸಿಕ ಪ್ರವೃತ್ತಿಗಳ ಆಗು–ಹೋಗುಗಳನ್ನು ಅವನ ಪರಿಸರ ಸೂಕ್ಷ್ಮವಾಗಿ ಅಳುತ್ತಿರುತ್ತದೆ. ಅಂದರೆ ಇದು ಮನುಷ್ಯನ ತೀರಾ ಖಾಸಗಿ ಮಾನಸಿಕ ಸ್ಥಿತಿಯನ್ನು ಸುತ್ತಲಿನ ಸಾಮಾಜಿಕ ಸ್ಥಿತಿಗಳನ್ನು ನಿರ್ದೇಶಿಸುತ್ತಿರುತ್ತದೆ. ಇಂತಹ ಸಂದರ್ಭಗಳಲ್ಲೂ ಮನಸ್ಸನ್ನು ಹಿಂಸಾ ಹಾಗೂ ಆಕ್ರಮಣಕಾರೀ ಪ್ರವೃತ್ತಿಗಳಿಂದ ಮುಕ್ತಗೊಳಿಸುವ ಕೆಲಸವನ್ನು ಪಂಜಾಬಿ ಕವಿಗಳು ಮಾಡಿದರು. ಅಂತಹ ಸಂದರ್ಭಗಳಲ್ಲಿ ಆದರ್ಶೀಕರಣಗೊಳ್ಳಬಹುದಾದ ಕವಿಯ ಕಾವ್ಯವು ಅನೇಕ ವಾಸ್ತವಿಕತೆಗಳನ್ನು ಬಿಟ್ಟುಕೊಡಬೇಕಾಯಿತು. ಅಂತಹ ವಾಸ್ತವಿಕ್ತತೆಯನ್ನು ಕೆಲವು ಕವಿತೆಗಳು ಹೊತ್ತುವಕೊಂಡು ಕಾವ್ಯಮಯವಾಗಿ ಮೂಡಿನಿಂತವು. ಅವುಗಳಲ್ಲಿ (೧) ಕವತೆಯಿಲ್ಲವಾದರೆ (೨) ಕೇಳವ್ವಾ ತಾಯಿ ನನ್ನ ದೇವತೆಯೆ! (೩) ಗಾಳಿಯ ದಿಕ್ಕು (೪) ತಮ್ಮ ತಮ್ಮ ಸೂರ್ಯ ಹಾಗೂ (೫) ನನ್ನ ಮಾತೃಭೂಮಿ ರೈತ ಪ್ರಮುಖವಾದವುಗಳು ಎನ್ನಬಹುದು.

ಜನ ಸಮೂಹವನ್ನು ದ್ವಂದ್ವ ಮಾನಸಿಕತೆಯಿಂದ ಬಿಡುಗಡೆಗೊಳಿಸಲು ಕವಿಯಾದವನಿಗೆ ಸ್ವಂತಃ ದ್ವಂದ್ವಗಳಿಂದ ಮುಕ್ತನಾಗುವುದು ಬಹಳ ಅವಶ್ಯಕವಾಗುತ್ತದೆ. ಈ ದೃಷ್ಟಿಯಿಂದ ಅಭಿವ್ಯಕ್ತಿಗೊಂಡ ಪ್ರಮಾಣಿಕವಾದ ಕವನವೆಂದರೆ – 'ಕವಿತೆ ಇಲ್ಲವಾದರೆ' ಎಂಬುದು

ಗೆಳೆಯ !
ಕವಿತೆಯ ಹೊರತು ಯುದ್ಧ ನಿಲ್ಲುವುದಿಲ್ಲ
ಕವಿತೆಯ ಹೊರತು ತಾಯಿ ತನ್ನ ಮಕ್ಕಳಿಗೆ
ಆಶೀರ್ವಾದ ಮಾಡುವದು ಸಾಧ್ಯವಿಲ್ಲ
ಕವಿತೆಯ ಹೊರತು ನಾವು ಹಸಿರು ಹುಲ್ಲಿನ

---

೧೫) ಡಾ. ಕೆ. ಕೃಷ್ಣಮೂರ್ತಿ – ಅನುವಾದ ಕಲೆ – ಪುಟ ಸಂ. – ೨೮

ಮೇಲೆ ಮಲಗುವದು ಸಾಧ್ಯವಿಲ್ಲ
– – – – – – –– – – – –– – –– –
– – – – – –– – – – – – – – – –
ಕವಿತೆಯ ಹೊರತು
ಮನುಷ್ಯ ಮನುಷ್ಯನಾಗಿರುವದಿಲ್ಲ
ಬೇರೆ ಏನಾದರೂ ಆಗಬಹುದು[೧೬]

ರಾಮಸಿಂಹ ಚಾಹಲರ ಮೂಲ ಕವಿತೆಯನ್ನು ಮೇಲಿನಂತೆ ಅನುವಾದಿಸಿರುವ ಅಂಬಲಗೆಯವರ ಈ ಕವನದಲ್ಲಿ ಕನ್ನಡದ ಮುಕ್ತ ಛಂದಸ್ಸು, ಧ್ವನಿ, ಪ್ರಾಸ, ಅನುಪ್ರಾಸ, ಅರ್ಥ, ಮಧುರತೆಯು ಮುಖ್ಯ ಅಂಶವಾಗಿದ್ದು ನಿಯತ ಕ್ರಮದ ಶ್ರೇಷ್ಠತೆಯನ್ನು ಉಳಿಸಿಕೊಂಡು ನಿಂತಿದೆ 'ಅಕ್ಷರ ಸಂಸ್ಕೃತಿ'ಯ ಅತೀ ಮಹತ್ವವನ್ನು ಹೇಳುವ ಇದು ಅಂದಿನ ಪಂಜಾಬಿನ ಸ್ಥಿತಿ ಗತಿಯ ಸುಧಾರಣೆಯ ಹಿನ್ನಲೆಯಲ್ಲಿ ಮಹತ್ವವೆನಿಸುತ್ತದೆ.

ಮಣ್ಣು ಸಹಜವಾಗಿಯೇ ಸುಂದರವೂ ಹಾಗೂ ಸುಗಂಧಮಯವೂ ಆಗಿರುತ್ತದೆ. ಅದರಲ್ಲಿ ನಿರ್ಮಾಣಾತ್ಮಕ ಕ್ರಿಯಾಶೀಲತೆಯ ಅದ್ಭುತವೂ ಹುದುಗಿರುವುದನ್ನು ಗಮನಿಸಬಹುದು. ಅದರಲ್ಲೂ ಭಾರತೀಯತೆಯನ್ನುಳ್ಳ ಮಣ್ಣು, ಪ್ರೀತಿ, ಸಹೋದರತೆ ಶಾಂತಿಗೆ ತವರುಮನೆಯಂತಿತ್ತು. ಇಂತಹ ಈ ನೆಲದಲ್ಲಿ ನೋವು, ಆಕ್ರೋಶ, ಬಂಡಾಯಗಳನ್ನು ಕಾಣುವ ಕವಿಯು ತನ್ನ ವಿಶಾಲಶೀಲತೆಯ ಗುಣದಿಂದ ಆತಂಕವನ್ನು ನಿವೇದಿಸುತ್ತಿರುವುದು ಮನನೀಯವಾಗುತ್ತದೆ.

ನಾನು ಮುಂದೆ ನಡೆದಂತೆ
ನನ್ನ ಸೆರಗು ಹಸಿಯಾಗಿದೆ
ಹಿಂದೆ ಕಾಲು ದಾರಿ ನಿರ್ಮಾಣವಾಗಿದೆ
ಮನ ಹೆಜ್ಜೆಗುರುತುಗಳ ರಸ್ತೆಯ
ಮನ ದಾರಿಹೋಕಳು ನಾನು[೧೭]

ಎನ್ನುವ ಕವಿ ತನ್ನ ಹೆಜ್ಜೆಗಳ ಕಾದಾಟವನ್ನು ತೋರಿಸುತ್ತಾಳೆ. ತನ್ನ ಮನದ ದ್ವಂದ್ವತೆಯನ್ನು ಬಿಚ್ಚುತ್ತ ––

ನನ್ನ ಹೆಣವನ್ನೇ ನಾ ಮುಚ್ಚಿಟ್ಟುಕೊಳ್ಳುವುದೇಕೆ?
ನನ್ನ ತಾಯಿ ಗರ್ಭದ ಆಶ್ಚರ್ಯ ಇಷ್ಟೇ ಸಾಕೆ?
ಮುಳ್ಳು ಚುಚ್ಚಿದರೂ ನಾ ನಡೆಯುತ್ತಿರುವೆನು
ನನ್ನ ಹೆಜ್ಜೆಗಳೊಡನೆಯೇ[೧೮]

---

೧೬. ಸಮಕಾಲೀನ ಪಂಜಾಬಿ ಕವಿತೆಗಳು – 'ಕವಿತೆ ಇಲ್ಲವಾದರೆ' ಪುಟ ಸಂ. ೩೬

೧೭. ಸಮಕಾಲೀನ ಪಂಜಾಬಿ ಕವಿತೆಗಳು – ಕೇಳವ್ವ ತಾಯಿ ನನ್ನ ದೇವತೆಯೇ ಪುಟ ಸಂ. ೯೯

೧೮. ಸಮಕಾಲೀನ ಪಂಜಾಬಿ ಕವಿತೆಗಳು – ಕೇಳವ್ವ ತಾಯಿ ನನ್ನ ದೇವತೆಯೇ ಪುಟ ಸಂ. ೯೯

ಎಂಬ ತನ್ನ ಕಾಲಘಟ್ಟದ ಸಂಘರ್ಷದ ನೆಲೆಯ ಕೋಲಾಹಲವನ್ನು ಹಿಡಿದು ತೋರುತ್ತಾಳೆ. ಹಾಗೆಯೇ ಪಂಜಾಬಿನಲ್ಲಿ ಬೀಸುತ್ತಿರುವ ಈ ಆತಂಕವಾದದ ಗಾಳಿಯನ್ನು 'ಗಾಳಿದಿಕ್ಕು' ಮನನಂಬುವಂತೆ ಹಿಡಿದಿಡುತ್ತದೆ. ಡಾ. ಅಂಬಲಗೆಯವರು ಇದನ್ನು ತುಂಬಾ ಸೊಗಸಾಗಿ ಅನುವಾದಿಸಿದ್ದಾರೆ. ಈ ಗಾಳಿಯಲ್ಲಿ ದೇವತೆಗಳ ಪ್ರತಿಬಿಂಬಗಳು ಚೀರಾಡುತ್ತ ಮುಂಜಾನೆಯಲ್ಲಿ ಶ್ಲೋಕಗಳನ್ನು ಪಟಿಸುತ್ತವೆಯಂತೆ ಯಾವುದೇ ಹಳೆಯ ಗ್ರಂಥಗಳ ಉಲ್ಲೇಖ ಬೇಡ ಯಾಕೆಂದರೆ ಅವುಗಳ ಅರ್ಥ ಇಂದು ಮಾಯವಾಗಿದ್ದು ಕಾಲನ ಬೆಂಕಿಯಲ್ಲಿ ಶಬ್ದಗಳು ಸುಟ್ಟುಹೋಗಿವೆಯಂತೆ ಅದಕ್ಕೆ ಕವಿ ಕೇಳುತ್ತಾಳೆ ಏನೆಂದರೆ

ಕಾರಾಗೃಹಗಳಿಗೆಲ್ಲ ಬೀಗವ ಜಡಿಯಿರಿ
ಏಕೆಂದರೆ ಅಪರಾಧಿಗಳೆಲ್ಲ
ರಸ್ತೆಯಲ್ಲಿಯೇ ತಿರುಗಾಡುತ್ತಿದ್ದಾರೆ
ವಾತಾವರಣ ಬದಲಾಗಲಿಲ್ಲವೇ?
ಯಾರಾದರೂ ವಿಜ್ಞಾನಿಗೆ ಕೇಳಿನೋಡಿ ಇಂದು[19]
'ಗಾಳಿ ಯಾವ ದಿಕ್ಕಿಗೆ ಬೀಸುತ್ತಿದೆ?' ಎಂದು[೧೯]

ಪಂಜಾಬಿನ ಕವಿಗಳ ಲೆಕ್ಕಣಿಕೆ ಸುಮ್ಮನಿರದೆ ಅದು ಆ ಕಾಲದ ನೋವು ಆತಂಕಗಳಿಗೆ ಹೇಗೆ ಸ್ಪಂದಿಸಿದೆ ಎಂಬುದರ ವಾಸ್ತವತೆ ಈ ಕಾವ್ಯದಲ್ಲಿ ಕಾಣಸಿಗುತ್ತದೆ. ಬರಹಗಾರರು ಆ ನೋವುಗಳನ್ನು ನಿಗ್ರಹಿಸಿ ತಮ್ಮ ಪ್ರತಿಕ್ರಿಯೆಗಳನ್ನು ಹೇಗೆ ಬರಹವಾಗಿಸಿದ್ದಾರೆ ಎಂಬುದನ್ನು ನಾವಿಲ್ಲಿ ಗುರುತಿಸಬಹುದಾಗದ್ದು ಆ ಸಮಾಜದ ಆಕ್ರೋಶ ಬಂಡಾಯ ಹಾಗೂ ನರಳಾಟಗಳನ್ನು ಅದರೊಂದಿಗೆ ಸಾಮಾಜಿಕ ನ್ಯಾಯದ ಬೇಡಿಕೆಗಳನ್ನು ಇಂತಹ ಅನುವಾದಿತ ಕವನಗಳ ಮೂಲಕ ಸಮರ್ಥವಾಗಿ ದೃಷ್ಟಿಸಬಹುದೆಂಬುದನ್ನು ಅನುವಾದಕರು ಇಲ್ಲಿ ತೋರಿದ್ದಾರೆ.

ತನ್ನ ವಿಶಿಷ್ಟವಾದ ಅನುಭವ ಹಾಗೂ ಅಭಿವ್ಯಕ್ತಿಗೆ ಬಳಸುತ್ತಿರುವ ಭಾಷೆಯ ಮೂಲಕ ಜನತೆಯ ಕಣ್ಣು ತೆರೆಸುವ ಕಾರ್ಯದಲ್ಲಿ ನಿರತರಾಗಿರುವ[೨೦] ಅಂಬಲಗೆಯವರು ಮೂಲ ಕವಿತೆಗಳ ವಸ್ತು, ಭಾವಗಳಿಗೆ ಎಲ್ಲಿಯೂ ಧಕ್ಕೆ ತಗಲದಂತೆ ಅನುವಾದಿಸಿರುವುದು ಅವರ ಕೊಡುಗೆ ಎನ್ನಬಹುದು. ಎಲ್ಲ ಕೊಲೆ, ಸುಲಿಗೆ, ಚಿತ್ಕಾರಗಳಿಗೆ ಆಶ್ರಯ ತಾಣ ಪೂಜಾ ಸ್ಥಳಗಳೇ ಆಗಿರುವ ಸಂಗತಿಯನ್ನು ಪ್ರತಿಮಾತ್ಮಕವಾಗಿ ಹೇಳುವ 'ಪೂಜಾ ಸ್ಥಳ' ಕವನ ಗಮನಾರ್ಹವಾಗುತ್ತದೆ.

ಕತ್ತಲೆಯ ಕಾಳರಾತ್ರಿಗಳ ಸಂಗಾತಿಯಾಗಿರುವ ಆ ವಾತಾವರಣದಲ್ಲಿ ಏನನ್ನೂ ಮಾಡಲು ಸಾಧ್ಯವಿಲ್ಲದಾಗಿತ್ತು.

---

೧೯) ಸಮಕಾಲೀನ ಪಂಜಾಬಿ ಕವಿತೆಗಳು – ಗಾಳಿಯ ದಿಕ್ಕು – ಪುಟ ಸಂ. ೧೦೧

೨೦) ರಾಹು ಕೋಗಿಲೆ ಅಳುತಿದೆ – ೧೯೯೩ ಹಿನ್ನುಡಿಯಲ್ಲಿ

ಕೊಲೆ ಸುಲಿಗೆ ಬಡತನ
ಯಾವುದೋ ತಾಯಿ ಗರ್ಭದ ರೋದನ
ಉಳಿಸಲಾಗದು ಅದರ ಹಿಡಿತದಿಂದ
ನನ್ನ ಮಗುವೆ![೨೧] ಈ ಕವಿತೆಯಿಂದ ಎನ್ನುವ ಕವಿಯು ತನ್ನ ಅಸಹಾಯಕತೆಗೆ ಮರುಗುತ್ತಾನೆ.

ಈಗ ರಸ್ತೆಗಳಲ್ಲಿ ಚೀತ್ಕಾರಗಳ
ತುಳಿಯುವುದು ಸಾಧ್ಯವಾಗದು
ಏಕೆಂದರೆ ––
ಎಲ್ಲ ಚೀತ್ಕಾರಗಳಿಗೆ ಆಶ್ರಯವಾದ
ವಿಶಾಲ ಕವಿತೆಯ ಪೂಜಾಸ್ಥಳವನ್ನೇ
ನಾನಿಂದು ಆರಿಸಿಕೊಂಡಿದ್ದೇನೆ[22]

ಶ್ರೀಮತಿ ಅಮರಜೀತ ಘಮ್ಮಣರ ಮೂಲ ಕವಿತೆಯನ್ನು ಅನುವಾದವಾಗಿರುವ ಇದರಲ್ಲಿ ವಸ್ತು ಚಿತ್ರಣ, ಭಾವಗ್ರಹಣ ಎರಡೂ ಅಂಶಗಳು ಸಶಕ್ತವಾಗಿ ಅಭಿವ್ಯಕ್ತಗೊಂಡಿದ್ದು, ಸಹೃದಯರನ್ನು ತಮ್ಮ ವ್ಯಂಗ್ಯ ನುಡಿಗಳಿಂದ ಚುಚ್ಚಿ ಎಚ್ಚರಿಸುತ್ತವೆ ಹಾಗೂ ಆ ಸನ್ನಿವೇಶವನ್ನು ಸರ್ವಗ್ರಾಹಿಯಾಗಿಸುತ್ತದೆ.

ಭಾಷಾಂತರವೆಂಬುದು ಒಂದರ್ಥದಲ್ಲಿ ಒಂದು ಭಾಷೆಯನ್ನು ಮತ್ತೊಂದು ಭಾಷೆಗೆ ಪರಿವರ್ತನೆ ಮಾಡುವ ವಿಧಾನವಾಗಿದ್ದು ಮೂಲ ಭಾಷೆಯಲ್ಲಿ ಸಂಸ್ಕೃತಿಯು ಕನ್ನಡಿಯಂತಾಗಿ ಬೇರೊಂದು ಭಾಷೆಯಲ್ಲಿ ಅದರ ಚೇತನವನ್ನು ಪ್ರತಿಬಿಂಬಿಸುತ್ತದೆ ಈ ದೃಷ್ಟಿಯಿಂದ ಅಂಬಲಗೆಯವರ ಭಾಷಾಂತರವು ಪಂಜಾಬಿ ಭಾಷೆಯನ್ನು ಹಿಂದೀ ಮೂಲಕ ಕನ್ನಡ ಭಾಷೆಗೆ ಪರಿವರ್ತನೆ ಮಾಡಿದ್ದಲ್ಲದೆ, ಆ ಸಂಸ್ಕೃತಿಯ ಚೇತನವನ್ನು ಕನ್ನಡದಲ್ಲಿ ಪ್ರತಿಬಿಂಬಿಸಲು ಪ್ರಯತ್ನಿಸಿದೆ ಎನ್ನಬಹುದು.

'ನಮ್ಮೆಲ್ಲರ ಹತ್ತಿರ ತಮ್ಮದೆ ಆದ
ಒಬ್ಬೊಬ್ಬ ಸೂರ್ಯನು ಇದ್ದಾನೆ' ಎಂಬ ಕವನದಲ್ಲಿ ಪ್ರತಿಯೊಬ್ಬರ ಮನದಲ್ಲಿರುವ ಕೋಪವನ್ನು ಸಾಬೀತು ಪಡಿಸುತ್ತಾರೆ. ಶ್ರೀಮತಿ ಪಾಲಕರರ ಮೂಲ ಕವಿತೆಯನ್ನು ಸಮರ್ಥವಾಗಿ ಭಾಷಾಂತರಿಸಿರುವ ಅಂಬಲಗೆಯವರು ಆ ಕೃತಿ ಯಾವುದೇ ಸ್ವರೂಪದಲ್ಲಿರಬಹುದೆಂಬುದನ್ನು

ಹೊತ್ತು ಅವನನ್ನು ಕೊಂಡು ತಾವೇ ನಗುತ್ತಾರೆ
ಬಚ್ಚಿಟ್ಟುಕೊಂಡು ತಾವೇ ತಾಳುತ್ತಾರೆ

---

೨೧) ಸಮಕಾಲೀನ ಪಂಜಾಬಿ ಕವಿತೆಗಳು – ಪೂಜಾ ಸ್ಥಳ – ಪುಟ ಸಂ. ೧೦೦

ಶರೀರ ಮುದುಡಿಕೊಂಡರೆ ತಮ್ಮ
ಸೂರ್ಯನನ್ನು ತಾವು ಕಳೆದುಕೊಳ್ಳುತ್ತಾರೆ
ಬಿಸಿಲು ಬಡಿದರೆ –
ಸೂರ್ಯನನ್ನು ಶರೀರದಲ್ಲಿ ಬಚ್ಚಿಟ್ಟುಕೊಂಡು
ತಮ್ಮ ನೆರಳಲ್ಲೇ ತಾವು ಕುಳಿತುಕೊಳ್ಳುತ್ತಾರೆ[೨೨]

ಎಂದು ವಿವರಿಸುತ್ತಾರೆ. ಈ ಸೂರ್ಯನು ಒಳ್ಳೆಯವನೇ ಆಗಿರಲಿ ಅಥವಾ ಕೆಟ್ಟವನೇ ಆಗಿದ್ದರೂ ಅವನು ನಮ್ಮೆಲ್ಲರಲ್ಲಿರುವ ನಮ್ಮವನೆ ಎಂಬುದನ್ನು ಅವರು ಸ್ಪಷ್ಟಪಡಿಸುತ್ತಾರೆ.

ನನ್ನ ಮಾತೃಭೂಮಿ ಹಾಗೂ ರೈತ ಎಂಬ ಕವನಗಳು ಡಾ. ಅಂಬಲಗೆಯವರ ಸುಂದರ ಅನುವಾದಗಳಾಗಿದ್ದು ಅವು ಚಿಂತನಶೀಲ ಬರಹಗಳಾಗಿವೆ ಅಧಿಕಾರದ ರಾಜಕೀಯ ಹೇಗೆ ರಕ್ತದೋಕುಳಿಯ ಹಿಂಸಾ ರಾಜ್ಯವನ್ನು ನಡೆಸುತ್ತದೆ. ಎನ್ನಲು ಪಂಜಾಬಿನ ಕೊಲೆಗಳು ಸಂಕೇತವಾಗುತ್ತವೆ. ಹಾಗೆಯೇ ಅಲ್ಲಿನ ಹಿಂಸಾಮಯ ವಾತಾವರಣವು ನನ್ನ ಮಾತೃಭೂಮಿ ಮಿನಿ ಕವನದಲ್ಲಿ ಹೀಗೆ ವ್ಯಕ್ತವಾಗಿದೆ –

ನನ್ನ ಮನೆಯಿಂದಲೇ
ನನಗೆ ಹೊರಹಾಕಲಾಗಿದೆ
– – – – – – – – – – –
– – – – – – – – – – –
ನನ್ನ ತಾಯಿಯನ್ನು ಬೇಟಿಯಾಗಲು
ಬೇರೆಯಾರಿಂದಲೋ ಅನುಮತಿ
ಪಡೆಯಬೇಕಾಗುತ್ತಲಿದೆ
ಅಂದಾಗ ತನ್ನ ದೇಶವನ್ನೇ
ತನ್ನ ಮಾತ್ರಭೂಮಿ ಎಂದು
ಕರೆಯುವುದು ಎಷ್ಟು ಕಷ್ಟ[೨೩]
ಎಷ್ಟು ಅದು ಅಸಾಧ್ಯ – – – – –

ಪ್ರಜಾಪ್ರಭುತ್ವದ ವ್ಯವಸ್ಥೆಯೊಂದನ್ನು ಒಪ್ಪಿಕೊಂಡ ದೇಶದಲ್ಲಿ ಉಚಿಟಾಗಿರುವ ಭಯದ ವಾತಾವರಣ ಹಾಗೂ ಅಲ್ಲಿ ಓಡಾಡಲು ಯಾರಿಂದಲೋ ಅನುಮತಿಯನ್ನು ಪಡೆಯಬೇಕಾದ ಸ್ಥಿತಿ ನಿರ್ಮಾಣವಾಗಿರುವ ದೃಶ್ಯವನ್ನು ಈ ಕವಿತೆಯು

---

೨೨) ಸಮಕಾಲೀನ ಪಂಜಾಬಿ ಕವಿತೆಗಳು – ತಮ್ಮ ತಮ್ಮ ಸೂರ್ಯ ಪುಟ ಸಂ. ೬೧
೨೩) ಸಮಕಾಲೀನ ಪಂಜಾಬಿ ಕವಿತೆಗಳು – ನನ್ನ ಮಾತೃಭೂಮಿ ಪುಟ ಸಂ. ೫೮

ಮನದಟ್ಟಾಗಿಸುತ್ತದೆ. ಇಲ್ಲಿಯ ರೈತನ ಸ್ಥಿತಿಯೂ ಚಿಂತಾಜನಕವಾಗಿರುವುದನ್ನು 'ರೈತ' ಮಿನಿಗವನ ಹೃದಯಕ್ಕೆ ತಿವಿಯುತ್ತಿದೆ.

ಎಲ್ಲರಿಗೂ ಗೊತ್ತು
ಅವನು ಮಣ್ಣಿನಲ್ಲಿ
ಏನೇನು ಬಿತ್ತುತ್ತಾನೆ ಎಂದು
ಆದರೆ ಇದು
ಅವನಿಗೆ ಮಾತ್ರ ಗೊತ್ತು:
ತನ್ನ ಎಂತಹ ಬೆವರನ್ನು
ರಾಸಾಯನಿಕ ಗೊಬ್ಬರದೊಡನೆ
ಪ್ರತಿಸಲವು ಬೀಜದೊಡನೆ
ಬಿತ್ತಲೆ ಬೇಕಾಗುತ್ತದೆ ಎಂದು[೨೪]

ಈ ರೀತಿ ಎಲ್ಲ ಆಕ್ರೋಶ, ನೋವು, ಪ್ರತಿಭಟನೆಗಳನ್ನು ಅವುಗಳ ಸಹಜ ಕವಿತೆಗಳಿಂದ ಮಕ್ತಗೊಳಿಸಿ ಕಾವ್ಯವಾಗಿಸುವಲ್ಲಿ ಪಂಜಾಬಿ ಕವಿಗಳು ತೋರಿದ ಪ್ರತಿಭೆಯನ್ನು ಅಷ್ಟೇ ಸಹಜವಾಗಿ ಆ ಭಾಷೆಯಿಂದ ಎತ್ತಿಕೊಂಡು ಹಿಂದೀ ಮೂಲಕವಾಗಿ ತನ್ನದಕ್ಕೆ ಭಾಷಾಂತರಿಸುವ ಡಾ. ಅಂಬಲಗೆಯವರ ಕಾರ್ಯ ಸ್ವಾಗತಾರ್ಹವಾಗಿದೆ ಎನ್ನಬಹುದು. ಅವರು ಇಲ್ಲಿ ಭಾಷಾಂತರ ಕಲೆಗೆ ಬೇಕಾಗುವ ಎಲ್ಲ ವಿಭಾಗಗಳಲ್ಲೂ ತಮ್ಮ ಅನುಭವ ಹಾಗೂ ಭಾಷಾ ಪ್ರತಿಭೆಯ ಕೌಶಲ್ಯವನ್ನು ಮೆರೆದಿರುವುದು ಎದ್ದು ಕಾಣುತ್ತದೆ.

---

೨೪) ಸಮಕಾಲೀನ ಪಂಜಾಬಿ ಕವಿತೆಗಳು – ಪುಟ ಸಂ. ೫೯

ಅಧ್ಯಾಯ : ೩

**೩ : ೩ ಓದಿ ಅಳುವುದು :**

'ಓದಿ ಅಳುವುದು' ಹಿಂದೀ ಕವಿತೆಗಳ ಕನ್ನಡ ಕಾವ್ಯಾನುವಾದವಾಗಿದ್ದು ಅದರಲ್ಲಿ 23 ಹಿಂದೀ ಕವಿಗಳ 45 ಕವನಗಳಿವೆ. 2002ರಲ್ಲಿ ಪ್ರಕಟಗೊಂಡಿರುವ ಈ ಕವನ ಸಂಕಲನದ ಹೆಸರಿಗೆ ಕಾರಣವೆಂದರೆ ಅದರಲ್ಲಿರುವ 1–ಪುಸ್ತಕ 'ಓದಿ ಅಳುವುದು' ಎನ್ನುವ ಕವನ ಎನ್ನಬಹುದು.

'ಓದಿ ಅಳುವುದು' ಎಂಬ ಕವನ ಸಂಕಲನ ದಿನಕರ ಹಾಗೂ ಪಂತ ಅವರಿಂದ ಪ್ರಾರಂಭವಾಗಿ ಪ್ರಯೋಗ ಧರ್ಮಿ 'ಅಜ್ಞೇಯ' ರಿಂದ ಮುಂದುವರೆದು, ನವ್ಯ ಹಾಗೂ ಪ್ರಗತಿಶೀಲ ಸ್ವಭಾವದ ಗಜಾನನ ಮಾಧವ ಮುಕ್ತಿಬೋಧ, ಧೂಮಿಲ್, ನಾಗಾರ್ಜುನ, ನರೇಶ ಮೆಹತಾ, ರಘುವೀರ ಸಹಾಯ, ಲಕ್ಷ್ಮಿಕಾಂತ ವರ್ಮಾ, ದುಷ್ಯಂತ ಕುಮಾರ, ಭರತಭೂಷಣ ಅಗರವಾಲ, ಗಿರಿಜಾ ಕುಮಾರ ಮಾಥುರ, ಸರ್ವೇಶ್ವರ ದಯಾಲ ಸಕ್ಸೇನಾ, ಶ್ರೀಕಾಂತ ವರ್ಮಾ, ಕೇದಾರನಾಥ ಸಿಂಹ, ಮಂಗಲೇಶ ಡಬರಾಲ, ಗಿರಿಧರ ರಾಠಿ ಹಾಗೂ ವಿನೋದಕುಮಾರ ಶುಕ್ಲ ಮುಂತಾದವರ ಕವನಗಳನ್ನು ಇಲ್ಲಿ ಅನುವಾದಿಸಲಾಗಿದ್ದು, ಅವುಗಳು ಕನ್ನಡ ಕಾವ್ಯಪ್ರೇಮಿಗಲಿಗೆ ಖುಷಿ ಕೊಡುತ್ತವೆ ಹಾಗೂ ಪ್ರೇರಣೆಯಾಗಿ ನಿಲ್ಲುತ್ತವೆ ಎಂದು ಅನುವಾದಕರು ಬಾವಿಸಿದ್ದಾರೆ[1].

ಈ ಕೃತಿಯಲ್ಲಿ ಅನುವಾದಗೊಂಡಿರುವ ಮೂಲಕವಿಗಳ ಕವನಗಳು ಈ ರೀತಿಯಲ್ಲಿವೆ.

| | | | |
|---|---|---|---|
| ೧. | ಡಾ. ರಾಮಧಾರಿಸಿಂಹ ದಿನಕರ | – | *ದೇವರುಗಳಿಲ್ಲ |
| | | | *ಪಾಪ |
| ೨. | ಸುಮಿತ್ರಾನಂದನ ಪಂತ | | *ಗ್ರಾಮಚಿತ್ರ |
| | | | *ಇಬ್ಬರು ಹುಡುಗರು |
| ೩. | ಮಹಾದೇವಿ ವರ್ಮಾ | – | *ನೋವುಗಳ ಕಟ್ಟಿಕೊಂಡವನು |
| ೪. | ಅಜ್ಞೇಯ | – | *ದೇವತೆಗಳು |
| ೫. | ಡಾ. ಧರ್ಮವೀರ ಭಾರತಿ | – | *ರಥದ ಮುರಿದಾಗಲಿ |

೧) ಡಾ. ಕಾಶಿನಾಥ ಅಂಬಲಗಿ – 'ಓದಿ ಅಳುವುದು' – ೨೦೦೨ – ಅನುವಾದಕರ – ಮಾತಿನಲ್ಲಿ

೬. ಗಜಾನನ ಮಾಧವ ಮುಕ್ತಿಬೋಧ – *ನನಗೆ ಹೆಜ್ಜೆ ಹೆಜ್ಜೆಗೆ
*ಬಂಡವಾಳ ಶಾಹಿ ಸಮಾಜ

೭. ಧೂಮಿಲ್ – *ಖೇವಲಿ
*ಪ್ರಜಾಪ್ರಭುತ್ವದ ಪರಸಂಗ

೮. ನಾಗಾರ್ಜುನ – *ಬರಗಾಲ ಹಾಗೂ ಆನಂತರ

೯. ಗಿರಿಜಾಕುಮಾರ ಮಾಥುರ – *ಎಲೆ ಉದುರುವ ಕಾಲ

೧೦. ಕೇದಾರನಾಥ ಅಗರವಾಲ – *ನದಿಯೊಂದು ತುಂಟಹುಡುಗಿ
*ಮನಸ್ಸಿನ ನದಿ

೧೧. ಸರ್ವೇಶ್ವರ ದಯಾಲ ಸಕ್ಸೇನಾ – *ಗರೀಬಿ ಹಟಾವ್ರೊ

೧೨. ವಿಷ್ಣು ನಾಗರ – *ಎಲ್ಲಕ್ಕಿಂತ ಒಳ್ಳೆಯಕವಿತೆ
*ಸಾಬೂನು

೧೩. ನರೇಶ ಮೆಹತಾ – *ಶಬ್ದ–ಸುಮನ
*ಮಂತ್ರತಂಥ ಮತ್ತು ಭಾಷೆ

೧೪. ರಘುವೀರ ಸಹಾಯ – *ಸ್ವತಂತ್ರ ವ್ಯಕ್ತಿ
*ಸ್ವಾತಂತ್ರ್ಯ
*ಪುಸ್ತಕ ಓದಿ ಅಳುವುದು
*ದೊಡ್ಡ ದೇಶಗಳ ರಾಜನೀತಿ
*ರಾಜರ ರಕ್ಷಣೆ
*ಮಂತ್ರಿವರ್ಯರ ಮನೆಯಲ್ಲಿ

೧೫. ಶ್ರೀಕಾಂತ ವರ್ಮಾ – *ಕಳಿಂಗ
*ಪ್ರತಿಕ್ರಿಯೆ

೧೬. ಶಮಶೇ ಬಹಾದ್ದೂರ ಸಿಂಹ – *ನನ್ನೊಳಗೆ ಇದೇನೋ_ _ _
*ಸೋತು ತಿಳಿದೆನಾ
*ಮುಂಜಾನೆ

೧೭. ಅಶೋಕ ವಾಜಪೇಯಿ – *ಮಕ್ಕಳು
*ಈ ದಿನಗಳಲ್ಲಿಯೆ

೧೮. ಕೇದಾರನಾಥ ಸಿಂಹ – *ಮಹಾನಗರದಲ್ಲಿ ಕವಿ
*ದೇವರಿಲ್ಲದಿದ್ದರೂ
*ಈ ಭೂಮಿ ಇದ್ದೇ ಇರುತ್ತದೆ
*ಬಂಡೆ ಚೂರುಮಾಡು

೧೯. ಮಂಗಲೇಶ ಡಬರಾಲ – *ಕೊಲೆಗಾರ
*ಬಿಳಿಗೊಡೆ

೨೦. ದುಷ್ಯಂತ ಕುಮಾರ – *ಸೂರ್ಯನಿಗೆ ಸ್ವಾಗತ
*ನಾನು ಹಾಗೂ ನನ್ನ ದುಃಖ

೨೧. ಗಿರಿಧರ ರಾಠಿ – *ಸ್ವರ್ಗದಿಂದ ಮತ್ತೊಂದು ವರದಿ

೨೨. ಭರತಭೂಷಣ ಅಗರವಾಲ – *ಅಹಿಂಸೆ

೨೩. ವಿನೋದಕುಮಾರ ಶುಕ್ಲ – *ನಿಸರ್ಗದಲ್ಲಿ
*ಬಹಳಷ್ಟು ಸಾಧಿಸಬಲ್ಲೆವು

ಹೀಗೆ 'ಓದಿ ಅಳುವುದು' ಕವನ ಸಂಕಲನವು 'ದೇವರುಗಳಿಲ್ಲ' ಎಂಬ ಕವಿತೆಯಿಂದ ಪ್ರಾರಂಭವಾಗಿ ಬಹಳಷ್ಟನ್ನು ಸಾಧಿಸಬಹುದು ಎಂಬ ಕವಿತೆಯವರೆಗೆ ಕೊನೆಗೊಳ್ಳುತ್ತದೆ. ಇದು ಕೂಡ ಒಂದರ್ಥದಲ್ಲಿ ಮನುಷ್ಯನ ಆರೋಗ್ಯಕರವಾದ ಆಶಯಗಳನ್ನು ಕುರಿತು ಬಹಳಷ್ಟನ್ನು ಹೇಳುತ್ತದೆ ಎನ್ನುವಂತಹ ಕವಿತೆಗಳು ಇಲ್ಲಿವೆ. ಕಣ್ಣಿಗೆ ಕಾಣದ ದೇವರನ್ನು ತೋರಿಸಲು ಪ್ರಯತ್ನಿಸುವ ಹಲವು ಸಂದರ್ಭಗಳನ್ನು ಸೂಕ್ಷ್ಮವಾಗಿ ಖಚಿಡಿಸುವ ಕವಿಯು ವಾಸ್ತವಿಕ ಚಿತ್ರಣವನ್ನು ಮುಂದಿಡುತ್ತಾರೆ.

ದೇವರುಗಳೇ ಇಲ್ಲ!
ನಿನಗೆಲ್ಲಿಂದ ತೋರಿಸಲಿ
ಶೂನ್ಯವಾಗಿದೆ ಆಕಾಶವೆಲ್ಲ
ಹೊಗೆಯ ಭ್ರಮೆ ನಾನೇಕೆ ಕೊಡಲಿ?

ಎಂದು ಆರಂಭವಾಗುವ ಈ ಕವಿತೆಯ ಜೀವನದಲ್ಲಿ ಅನುಭವಿಸಬೇಕಾದುದ್ದನ್ನು ಅನುಭವಿಸಿಯೇ ಬಿಡಬೇಕು ಎಂಬ ಹೇಳಿಕೆಗೆ ಪುಷ್ಟಿಕೊಡುತ್ತದೆ. ಚಾರ್ವಾಕವಾದದ ಪ್ರಭಾವದ ಹಿನ್ನಲೆಯಲ್ಲಿರುವ ಇದು ಬದುಕನ್ನು ಒಂದು ಗುಂಪಿನ ಜೀವನದ ಹಿನ್ನೆಲೆಯಲ್ಲಿ ಅರ್ಥೈಸಲು ಪ್ರಯತ್ನಿಸುತ್ತಿದೆ.

ನಿನಗಾವುದು ಸುಖವೋ ಅದೇ ಬದುಕು
ಉತ್ಸಾಹ ಇರಲಿ ಅದಕು ಇದಕು ಎದಕು
ಬೆರಳುಗಳಲ್ಲಿ ಹಳದಿ ಕಲೆ ಹರಡಲಿ
ಅದರೂ ದೇವತೆಗಳೆಂಬುವರಿಲ್ಲ
ನಿನಗೆ ತೋಚಿದಂತೆ ಬದುಕು[೨]

ಎಂಬಲ್ಲಿಯ ಭಾವವು ಇಂದಿನ ವಾಸ್ತವಿಕ ಬದುಕಿನ ಸಮಾಜದಲ್ಲಿಯ ಒಂದು

---

೨. ಓದಿ ಅಳುವುದು – ಡಾ. ಕಾಶಿನಾಥ ಅಂಬಲಗೆ – ದೇವರಿಲ್ಲದಿದ್ದರೂ ಪುಟ ಸಂ. ೧

ಗುಂಪಿನ ಪ್ರತಿನಿಧಿತ್ವದ ಹೇಳಿಕೆಯನ್ನು ತಿಳಿಸುತ್ತದೆ. ಅಷ್ಟೇ ಅಲ್ಲ; ದೇವರಿಲ್ಲದಿದ್ದರೂ ಈ ಜಗತ್ತು ಸರಿಯಾಗಿ ಕ್ರಿಯಾಶೀಲವಾಗಿರುವುದನ್ನು ನಾವಿಲ್ಲಿ ಕಾಣಬಹುದು ಎಂದು ಹೇಳುತ್ತದೆ. ಕೇದಾರನಾಥ ಸಿಂಹರ ಕವಿತೆಯ ಅನುವಾದವು ಇದಾಗಿದ್ದು, ಡಾ. ಅಂಬಲಗೆಯವರ ಶ್ರೇಷ್ಠತೆಯನ್ನು ಹೇಗೆ ತೋರಿಸುತ್ತದೆ ಎಂಬುದನ್ನಿಲ್ಲಿ ಗಮನಿಸಬಹುದಾಗಿದೆ.

ಏನಾಶ್ಚರ್ಯ ಹತ್ತು ಗಂಟೆ ಸಮಯ
ಜಗತ್ತಿನ ಎಲ್ಲ ಕೆಲಸಗಳು ನಡೆಯುತ್ತಿವೆ
ದೇವರಿಲ್ಲದಿದ್ದರೂ – – – – – – – – ಎಂಬಲ್ಲಿ ಜಗತ್ತಿನ

ಪ್ರತಿಯೊಂದು ಕಾರ್ಯಗಳು 'ದೇವರುಗಳಿಲ್ಲದಿದ್ದರೂ' ನಡೆಯುತ್ತವೆ ಎಂಬುದು ತಿಳಿಸುವ ಈ ಕವಿತೆಯ ದಿನನಿತ್ಯ ನಡೆಯುವ ಪ್ರಪಂಚದ ಆಗುಹೋಗುಗಳ ಪಟ್ಟಿಯನ್ನು ಕೊಡುತ್ತದೆ.

ಸಮಯಕ್ಕೆ ಸರಿಯಾಗಿ ಬ್ಯಾಂಕ ತೆರೆಯುತ್ತದೆ
ಹುಲ್ಲು ಚಿಗುರುತ್ತಲೇ ಇರುತ್ತದೆ
ಪ್ರತಿಯೊಮದು ಲೆಕ್ಕ ಎಷ್ಟೇ ಕಷ್ಟದಿಂದ್ದರೂ
ಕೊನೆಗೆ ಹೊಂದಿಕೊಂಡುಬಿಡುತ್ತದೆ
ಬದುಕಬೇಕಾದವನು ಸಾಯುತ್ತಾನೆ
ದೇವರಿಲ್ಲದಿದ್ದರೂ . . . . . . . . . [೩]

ಎಂಬಲ್ಲಿ ಅದನ್ನು ಕಾಣಬಹುದು. ರೈಲು ಬರುವುದು ಹೋಗುವುದು, ಬಸ್ಸುಗಳು ತುಂಬಿ ತುಳುಕುವುದು ಅವಸರದಲ್ಲಿದ್ದ ಜನರು ಚುನಾವಣೆಗಳು ನಡೆಯುವದು, ಪಕ್ಷಿಯೊಂದು ದಿನಗಟ್ಟಲೆ ಹಾರಾಡಿದ ಮೇಲೆ ತನ್ನ ಗೂಡಿಗೆ ಮರಳುವುದು, ದೇವರಿಲ್ಲದಿದ್ದರೂ ನಡೆಯುವ ಕ್ರಿಯೆಗಳು.

ಹಾಗೆಯೇ ಅಂಬಲಗೆಯವರ 'ಈ ಭೂಮಿ ಇದ್ದೇ ಇರುತ್ತದೆ' ಎಂಬುದು ಭೂಮಿಯ ಹಾಗೂ ಅದರ ಮೇಲಿನ ಜೀವನದ ಬಗ್ಗೆ ಇರುವ ನಂಬಿಗೆಯನ್ನು ಸೂಚಿಸುತ್ತದೆ. ಈ ಭೂಮಿಯು ಬೇರೆಡೆ ಇಲ್ಲದಿದ್ದರೂ ಅದು ಗೆದ್ದಲ್ಲಿಗಳಿರುವಂತೆ ಗಿಡದ ಬೊಡ್ಡೆಗಳಲ್ಲಿ ನುಸಿಗಳು ಇರುವಂತೆ ಕಾಳುಗಳಲ್ಲಿ ಅದು ಇದ್ದೆ ಇರುತ್ತದೆ ಎನ್ನುವ ಕವಿಯು

ಈ ಭೂಮಿಯು ಪ್ರಳಯದ ನಂತರವೂ
ನನ್ನ ಒಳಗೆ ಇದ್ದೇ ಇರುತ್ತದೆ
ಬೇರೆಡೆ ಇಲ್ಲದಿದ್ದರೂ ನನ್ನ ನಾಲಿಗೆಯಲ್ಲಿ
ಹಾಗೂ ನನ್ನ ನಶ್ವರತೆಗಳಲ್ಲಿ[೪]

---

೩. ಓದಿ ಅಳುವುದು – ಡಾ. ಕಾಶಿನಾಥ ಅಂಬಲಗೆ – ದೇವರಿಲ್ಲದಿದ್ದರೂ ಪುಟ ಸಂ. ೧

೪. ಓದಿ ಅಳುವುದು – ಡಾ. ಕಾಶಿನಾಥ ಅಂಬಲಗೆ – ದೇವರಿಲ್ಲದಿದ್ದರೂ ಪುಟ ಸಂ. ೬೯–೭೦

ಎಂದು ಹೇಳುತ್ತ ಭೂಮಿಯು ಯಾವ ಯಾವ ರೂಪದಲ್ಲಿ ಕಾಣಬರುತ್ತದೆ. ಎಂಬುದನ್ನು ಇಲ್ಲಿ ಕವಿಯು ತಿಳಿಸುತ್ತಾನೆ.

"ಅಸದಳ ಪ್ರೀತಿ ಮತ್ತು ರಾಜಿಯಾಗದ ಸೈದ್ಧಾಂತಿಕ, ಹಟ ಇವೆರಡೂ ಅಂಬಲಗಿಯವರ ಕಾವ್ಯದ ಮೂಲಧಾತು"[೫] ಗ್ರಾಮರಾಜ್ಯದ ಕನಸು ಕಾಣುತ್ತಿದ್ದ ಮಹಾತ್ಮಾಜಿಯವರ ಆಶಯಗಳನ್ನು ಹೊತ್ತು ನಿಂತಿರುವ ಈ ಹಳ್ಳಿಯವಾಸಿ; ಈಗಿನ ಅದರ ಚಿತ್ರವನ್ನು ಅನಾವರಣಗೊಳಿಸುತ್ತಾನೆ.

ಇಲ್ಲಿಲ್ಲ ಗರ್ದಿಗಮ್ಮತ್ತು
ವೈಭವದ ಜೀವನ ಸಂಪತ್ತು
ಇಲ್ಲಿರುವುದು ಕೇವಲ ಧೂಳು ತುಂಬಿದ ಕಾಡಿನ ಕಲರವವು
ಮೌನ ಬೆಳಗು ಬೆಳಗುವದು, ಸೂರ್ಯಾಸ್ತ ನಿರಾಶೆಯ ಗೀತೆಯ
ಇಲ್ಲಿ ಮಧ್ಯಾಹ್ನದ ಕಾಯ್ದಕನಸುಗಳು ಓಡಾಡುವವು
ಇಲ್ಲಿಲ್ಲ ವಿದ್ಯುತ್ ಬೆಳಕಿನ ಆಟೋಟೋಪವು
ಭಯಗೊಂಡಿರುವುದು ಆಳವಾದ ಗಬ್ಬುಕತ್ತಲೆಯು[೬]

ಈ ಗ್ರಾಮದಲ್ಲಿಯ ನಿವಾಸಿಗಳು ಯುಗಯುಗಗಳ ಶಾಪಗ್ರಸ್ತರು ಖೂಳರಿರುವರು. ಅವರು ಬಟ್ಟೆಬರೆಗಳಿಲ್ಲದ ಅಜ್ಞಾನದ ಕೆಸರಲ್ಲಿ ಸಿಕ್ಕಿಕೊಂಡಿರುವರು, ಈ ಅರ್ಥದಲ್ಲಿ ಇದು ಮಾನವಲೋಕವಲ್ಲ. ನರಕದ ಯಾತನೆಯ ಕೇಂದ್ರವೆನಿಸಿದೆ. ಗ್ರಾಮ ರಾಜ್ಯವಾಗಿರುವ ಈ ಭಾರತವು ಸಂಸ್ಕೃತಿ ನಾಗರಿಕತೆಗಳ, ಹೊರಗಿರುವುದು ಕಸಕಟ್ಟೆ ಹೊಲಸುಗಳಿಂದ ತುಂಬಿದ ಇದು ನಾಡ ಶಿಲ್ಪಿಯ ಮನೆಯೇ? ಹೆಣ್ಣುಗಂಡುಗಳ ವಾಸಸ್ಥಾನವೇ? ಅಲ್ಲ ಇದು ಅಸಹಾಯ ಕತೆಗಳ ಸಾಗರ, ಮನೆ-ಮೆನಗಳಲ್ಲಿ ಜಗಳ ಹಾಗೂ ಹೊಲ ರಸ್ತೆಗಳಲ್ಲಿ ಹೊಡೆದಾಟವಿರುವ ತಾಣವಾಗಿದೆ. ಆದರೂ ಗ್ರಾಮಗಳಲ್ಲಿ ಕಾಣುವ ಸೂರ್ಯ, ಚಂದ್ರ, ನಕ್ಷತ್ರ, ಚಿಂವಗುಡುವ ಹಕ್ಕಿ, ಹಚ್ಚಹಸಿರಿನ ಹೊಲಗಳು, ಹೂ ಹಣ್ಣು, ಕೋಗಿಲೆಯ ಹಾಡು, ಬಿತ್ತಿದ ಬೆಳೆ ಮುಂತಾದವುಗಳಿಂದ ಕೂಡಿರುವಂತಹದ್ದು- 'ಪ್ರಕೃತಿ' ತೊಟ್ಟಿಲ ಕಣಕಣಗಳಲ್ಲಿ ಜೀವಂತಿಕೆಯ ಗೂಡು, ಇಲ್ಲಿ ಮನುಷ್ಯನೊಬ್ಬನೇ ಅಯ್ಯೋ, ಇದ್ದು ಸತ್ತಂತೆ ನೋಡು[೭] ಎಂದು ಅರ್ಥಗರ್ಭಿತವಾಗಿ ಸುಮಿತ್ರಾನಂದನ ಪಂತರ ಕವನವನ್ನು ಅನುವಾದಿಸಲಾಗಿದೆ. ಗ್ರಾಮದ ವಾಸ್ತವಿಕ ಚಿತ್ರಣವನ್ನು ನೀಡುವ ಈ ಕವನ ಅಂಬಲಗೆಯವರ ಉತ್ತಮ ಅನುವಾದದ ಕವನಗಳೊಲ್ಲೆಂದಾಗಿದೆ.

ಇಂದಿನ ಪ್ರಜಾಪ್ರಭುತ್ವದ ಏರಿಳಿತಗಳ ಅಡಿಯಲ್ಲಿ ಸಿಲುಕಿ ನಲುಗಿ ಹೋಗಿರುವ

---

೫) ಮೀನಾಕ್ಷಿ ಬಾಳಿ – ಮುನ್ನುಡಿಯಲ್ಲಿ – ಚುಳುಕಾದಿರಯ್ಯ ಪುಟ ಸಂ. VI

೬) ಓದಿ ಅಳುವುದು – ಡಾ. ಕಾಶಿನಾಥ ಅಂಲಗೆ ಪುಟ ಸಂ. ೪

೭) ಓದಿ ಅಳುವುದು – ಡಾ. ಕಾಶಿನಾಥ ಅಂಬಲಗೆ ಪುಟ ಸಂ. ೧೫

ಬದುಕಿನ ಪ್ರೀತಿ–ಪ್ರೇಮದ ಬವಣೆಯಲ್ಲಿ ಅಕ್ಷರಗಳಲ್ಲಿ ಕಂಡಿರಿಸುವ ಕಾಯಕ ಅಂಬಲಗೆಯವರಿಗೆ ಯಾವಾಗಲೂ ಖುಷಿ ನೀಡಿದೆ. ಹೀಗಾಗಿ ಅವರ ಅನುವಾದಿತ ಕವನಗಳಲ್ಲಿ ಹಲವಾರು ನೋವಿನ ಕಥೆಗಳು, ಹಲವು ಅಹವಾಲುಗಳು, ಅಹಂಕಾರದ ವಿಶ್ಲೇಷಣೆ ಹಾಗೂ ಐತಿಹಾಸಿಕ ವ್ಯಾಖ್ಯಾನುಗಳು ಕಾಲದ ಶ್ಲೋಕ ಸೂತ್ರಗಳ ಕೇಳಲು ದೊರಕುತ್ತವೆ. ಅವರ,

ನನಗೆ ಹೆಜ್ಜೆ ಹೆಜ್ಜೆಗೆ
ಕೂಡು ರಸ್ತೆಗಳು ಸಿಗುತ್ತವೆ
ಎದೆ ತುಂಬಿ ಸ್ವಾಗತಿಸುತ್ತವೆ
ಒಂದೆಡೆ ಕಾಲಿಡುತ್ತೇನೆ ಅಲ್ಲಿ
ನೂರಾರು ದಾರಿಗಳು ಹುಟ್ಟುತ್ತವೆ[೮]

ಎನ್ನುವ ಕವನವು ಬದುಕಿನ ಹಲವು ಮಗ್ಗಲುಗಳನ್ನು ತೆರೆದು ತೋರಿಸುತ್ತದೆ. ಆ ಎಲ್ಲ ದಾರಿಗಳ ಮೂಲಕ ಹೋಗಬಯಸುವ ಕವಿಯು ಅವುಗಳ ಅನುಭವ ಹಾಗೂ ತನ್ನ ಕನಸುಗಳನ್ನು ಸುಂದರವಾಗಿ ನೋಡುತ್ತಾನೆ. ಆ ಸಮಯ ತುಂಬಾ ಖುಷಿ ಕೊಡುತ್ತದೆ. ಆಗ ವಿಚಿತ್ರವಾದ ಉತ್ಸಾಹ ಹೃದಯ ತುಂಬುವುದನ್ನು ತಿಳಿಸುವ ಕವಿಯು ಅದರಲ್ಲಿ ಇಳಿಯ ಬಯಸುತ್ತಾನೆ. ಆ ಸಂದರ್ಭವು ಜೀವನದ ಸಿಹಿ–ಕಹಿಗಳನ್ನು ದರ್ಶಿಸುತ್ತದೆ. ತನ್ನನ್ನೇ ಹೊತ್ತು ಕೊಂಡು ತಾನು ಸುತ್ತಾಡುತ್ತಿರುವ ಇಂಥ ವಿಚಿತ್ರವಾದ ಈ ಜೀವನವನ್ನು ಇದು ಸಂಕೇತಿಸುತ್ತದೆ.

ಡಾ. ಅಂಬಲಗೆಯವರು ಅನುವಾದಿಸಿರುವ ಇಲ್ಲಿಯ ಎಷ್ಟೋ ಕವಿತೆಗಳು ಮುಗುಳ್ನಗುತ್ತವೆ. ಕೆಲವು ಮುನಿಸಿಕೊಳ್ಳುತ್ತವೆ. ಹಲವು ಪ್ರೀತಿ–ಪ್ರೇಮದ ಮಾತುಗಳನ್ನಾಡುತ್ತವೆ. ಸಾವು ಬದುಕಿನ ಜ್ವಲಂತ ಮೆಟ್ಟಲುಗಳಂತಿರುವ ಅವು ಗೌರವದಿಂದ ತಲೆಬಾಗಿಯೂ ನಿಲ್ಲುತ್ತವೆ. ಹೀಗಾಗಿ ಲೆಖಕನಿಗಿರು ಅನಿಸಿಕೆ ಏನೆಂದರೆ

ನನಗೆ ಅನಿಸುತ್ತದೆ . . . . . .
ಇಂದಿನ ದಿನಗಳಲ್ಲಿ ಲೆಖಕನ ಸಮಸ್ಯೆ
ಎಂದರೆ ವಿಷಯಗಳ ಕೊರತೆ ಅಲ್ಲ
ವಿಷಯಗಳ ಬಾಹಳ್ಯವೇ ಅವನ ಸಮಸ್ಯೆ
ಯೋಗ್ಯ ಆಯ್ಕೆ ಮಾಡಲಾಗದಿರುವುದೇ ಸಮಸ್ಯೆಯಾಗಿ[೯]

ನಿಲ್ಲುವುದನ್ನು ಕವಿಸ್ಪಷ್ಟಪಡಿಸುತ್ತಾನೆ. ಅಂಬಲಗೆಯವರಿಗೆ ತಾನೇಕೆ ಬರೆಯಬೇಕು? ಎಂಬುದರ ಬಗ್ಗೆ ಸ್ಪಷ್ಟವಾಗದ ನಿಲುವು ಮತ್ತು ನಿದಿಷ್ಟವಾದ ಗ್ರಹಿಕೆಗಳಿವೆ. ಈ ತೆರನಾದ

---

೮. ಓದಿ ಅಳುವುದು – ಡಾ. ಕಾಶಿನಾಥ ಅಂಬಲಗೆ ಪುಟ ಸಂ. ೧೫

೯. ಓದಿ ಅಳುವುದು – ಡಾ. ಕಾಶಿನಾಥ ಅಂಬಲಗೆ ಪುಟ ಸಂ. ೧೬

ಬದ್ಧತೆಯು ಕಾವ್ಯದ ಮಿತಿಯೂ ಚಾರಿತ್ರಿಕ ಒತ್ತಡವೂ ಆಗಬಹುದಾದರೂ ಬದುಕಿಗೆ ಮೋಸಮಾಡದ ಮುಗ್ಧತೆಯು ಅವರ ಕವನಗಳಲ್ಲಿ ಸದಾ ಎದ್ದು ಕಾಣುತ್ತದೆ.

ಅಲ್ಲಿ ಕಾಡೂ ಇಲ್ಲ ಪ್ರಜಾ ಪ್ರಭುತ್ವವೂ ಇಲ್ಲ
ಭಾಷೆ ಹಾಗೂ ಮೌನದಲ್ಲಿ ಯಾವ ಅಂತರವೂ ಇಲ್ಲ[೧೦]

ಎನ್ನುವ ಧೂಮಿಲ ಅವರ ಖೇವಲಿ ಎನ್ನುವ ಅನುವಾದವು ಹಳ್ಳಿಯ ಒಂದು ಮುಖವನ್ನು ಚಿತ್ರಿಸುತ್ತದೆ. ಬಿರುಕುಬಿಟ್ಟ ಭೂಮಿಯಲ್ಲಿ ಹಾಗೂ ವಿಚಾರದಲ್ಲಿ ಮುಳುಗಿದ ಮುಖಗಳಲ್ಲಿ ಯಾವ ವ್ಯತ್ಯಾಸವನ್ನು ಕಾಣದ ಸ್ಥಿತಿ ಅಲ್ಲಿ ಹೆಪ್ಪು ಗ್ಟಟ್ಟಿರುವುದನ್ನು ತಿಳಿಸುತ್ತದೆ.

ಯಾವ ಕನಸೂ ಇಲ್ಲದ ಅಲ್ಲಿ ತೋಳಗಳ ಭಯವು ಇಲ್ಲವೇ ಇಲ್ಲ ತಿನ್ನಲು ಯೋಗ್ಯವಾದದ್ದು ಉಳಿಯುವದಿಲ್ಲ ಅಲ್ಲಿ ಎಲ್ಲವೂ ಸದಾಚಾರದಂತೆ ಸರಳವಾಗಿರುವದು. ಅಲ್ಲಿಯ ವೈಫಲ್ಯತೆಗಳು ಮನೆ ಮಾಡಿಕೊಂಡಿರುವುದನ್ನು ಈ ಕವನ ಧ್ವನಿಸುತ್ತದೆ

'ಪ್ರಜಾಪ್ರಭುತ್ವದ ಪರಸಂಗ'ಎಂಬ ಕವನ ಅಂಬಲಗೆಯವರ ಇನ್ನೊಂದು ಉತ್ತಮ ಅನುವಾದ ಎನ್ನಬಹುದು.

ಕಡಚಗಿ ಪತ್ತಲೆಯೊಡನೆ ಹರಟೆ ಹೊಡೆಯುತ್ತದೆ.
ಚಿಮ್ಮಟಿ ಹಂಚಿನೊಡನೆ ನಗೆಯಾಡುತ್ತದೆ
ಒಲೆ ಏನೂ ಮಾತನಾಡುವದಿಲ್ಲ
ಸುಮ್ಮನೆ ಉರಿಯುತ್ತದೆ ಉರಿಯುತ್ತಲೇ ಇರುತ್ತದೆ[೧೧]

ಸಾವಕಾಶವಾಗಿ ಏಳುವ ಹೆಣ್ಣುಮಕ್ಕಳು ಮಡಿಕೆಯಲ್ಲಿ ಕೈಯಾಡಿಸುವುದು ಒಂದು ಬಟ್ಟೆ ಗಂಟು ಬಿಚ್ಚುವದು ಅದನ್ನು ಕಟ್ಟಿಗೆಯ ಪತ್ತಲೆಯಲ್ಲಿ ಕೊಡವುದು ಆದರೂ ಪತ್ತಲೇ ಹೊಟ್ಟೆ ತುಂಬದೇ ಹೋಗುವುದನ್ನು ಪ್ರತಿಮಾತ್ಮಕವಾಗಿ ಅನುವಾದಿಸಿರುವುದು ಇಲ್ಲಿ ಕಾಣುತ್ತದೆ.

ಮಕ್ಕಳು ಅಂಗಳದಲ್ಲಿ ಕ್ಷಣ್ಣಾಮುಚ್ಚಾಲೆ ಆಡುತ್ತವೆ
ಆನೆ ಕುದುರೆ ಕಳ್ಳ–ಸಾವುಕಾರ ಆಟ ಆಡುತ್ತವೆ
ರಾಜಾ–ರಾಣಿ ಆಡುತ್ತವೆ, ಆಡುತ್ತಲೇ ಇರುತ್ತವೆ
ಅಡಿಗೆ ಮನೆಯಲ್ಲಿ ಅಡಗಿ ಹೋದ ಹೆಣ್ಣಿನ ಕೈಗಳು
ಏನೂ ನೋಡುವುದಿಲ್ಲ ರೊಟ್ಟಿ ಬಡಿಯುತ್ತವೆ, ಬಡೀತಾ ಇರುತ್ತವೆ[12]

---

೧೦. ಓದಿ ಅಳುವುದು – ಡಾ. ಕಾಶಿನಾಥ ಅಂಬಲಗೆ ಪುಟ ಸಂ. ೧೯

೧೧. ಓದಿ ಅಳುವುದು – ಡಾ. ಕಾಶಿನಾಥ ಅಂಬಲಗೆ ಪುಟ ಸಂ. ೨೧

೧೨. ಓದಿ ಅಳುವುದು – ಡಾ. ಕಾಶಿನಾಥ ಅಂಬಲಗೆ ಪುಟ ಸಂ. ೨೧–೨೨

ಎಂಬಲ್ಲಿ ಹೀಗೆ ಇಲ್ಲಿ ಅಭಿವ್ಯಕ್ತಿಯ ಅವಶ್ಯಕತೆ ಹಾಗೂ ಆಯಾ ಕ್ರಮಕ್ಕೆ ಅನುಗುಣವಾದ ಭಾಷೆಯನ್ನು ಸೃಷ್ಟಿಸುತ್ತ ಅದರ ಸಂವಹನಾ ಸಾಧ್ಯತೆಯನ್ನು ಹಿಗ್ಗಿಸುತ್ತಾ ಹೋಗಿರುವುದನ್ನು ಕಾಣಬಹುದು. ಪ್ರಜಾಪ್ರಭುತ್ವದ ಪರಸಂಗವನ್ನು ಪ್ರತಿಮಾತ್ಮಕವಾಗಿ ಹಿಡಿದಿಟ್ಟಿರುವ ಈ ಕವನವೊಂದು ಸುಂದರ ಅನುವಾದವೆನಿಸುತ್ತದೆ ಹಗೂ ವಾಸ್ತವಿಕ ರೀತಿಗೆ ಸಾಕ್ಷಿಯಾಗಿ ನಿಲ್ಲುತ್ತದೆ.

ಗರೀಬಿ ಹಠಾವೊ ಈ ಸಂಕಲನದ ದೊಡ್ಡ ಕವನವಾಗಿದ್ದು 'ಸರ್ವೇಶ್ವರ ದಯಾಲ ಸಕ್ಸೇನಾ' ಮೂಲಕವಿತೆಯನ್ನು ಡಾ. ಅಂಬಲಗೆಯವರು ಸುದೀರ್ಘವಾಗಿಯೇ ಅನುವಾದಿಸಿದ್ದಾರೆ. ಭಾರತ ದೇಶದಲ್ಲಿ ಸರಕಾರ ಎತ್ತಿಕೊಂಡಿರುವ ಹಲವು ಪ್ರಗತಿಪರ ಕಾರ್ಯಕ್ರಮಗಳಲ್ಲಿ 'ಗರೀಬಿ ಹಠಾವೋ' ಕೂಡ ಒಂದು. ಆದರೆ ಅವರ ಉತ್ತಮವಾಗಿರುವ ಉದ್ದೇಶಗಳೆಲ್ಲ ಬಳಕೆಯಲ್ಲಿ ಬಾರದೆ ಅದೊಂದು ಬೂಟಾಟಿಕೆಯ ಸ್ಕೀಮ್ ಆಗಿ ನಿಂತಿರುವುದನ್ನು ಈ ಕವನ ತಿಳಿಸುತ್ತದೆ.

ಗರೀಬಿ ಹಠವೊ ಕೇಳಿದ ಕೂಡಲೆ
ಎಲ್ಲರೂ ಬೂಟು ಹೊಲಿಸಿ
ಚಪ್ಪಲಿಗಳಿಗೆ ಮಳೆ ಬಡಿಸಿ ಹೊರಟರು
ದೂರದವರೆಗೆ ನಡೆದ ಮೇಲೆ
ಎಲ್ಲಿಗೆ ಹೋಗುವುದು? ಎಂದು ವಿಚಾರಿಸಲು ಕುಳಿತರು[೧೩]

ಪ್ರಚಲಿತ ವಿದ್ಯಮಾನ ಹಾಗೂ ವರ್ತಮಾನದ ಸಂದರ್ಭವೊಂದನ್ನು ಗಮನಿಸುವ ಈ ಕವನ ವಿಡಂಬನಾತ್ಮಕವಾಗಿದ್ದು, ಗಮನಾರ್ಹವಾಗುತ್ತದೆ. ಜನಪರವಾದ ನಿಲವುಳ್ಳ ಹಿಂದೀ ಕವಿತೆಯ ಇಲ್ಲಿಯ ಅನುವಾದವು ಒಳಗಿನ ಒತ್ತಾಸೆಯಿಂದ ನಿಲವುಳ್ಳ ಹಿಂದೀ ಕವಿತೆಯ ಇಲ್ಲಿಯ ಅನುವಾದವು ಒಳಗಿನ ಒತ್ತಾಸೆಯಿಂದ ಧ್ವನಿಯುಕ್ತವಾಗಿ ಮಾಡಿನಿಂತಿದೆ ಎನ್ನಬಹುದು. 'ಗರೀಬಿ ಹಠಾವೋ' ನೆಪದಲ್ಲಿ ಬಲವುಳ್ಳವರು, ಶ್ರೀಮಂತರು ರಾಜಕಾರಣಿಗಳು ಕೊಬ್ಬಿ ಹೋಗಿರುವುದನ್ನು ಪ್ರತಿಮಾತ್ಮಕವಾಗಿ ತಿಳಿಸುವ ಈ ಕವನ ಕಣ್ಣ್ನ ಸೆಳೆಯುತ್ತದೆರ

'ಗರೀಬಿ ಹಠಾವೋ' ಕೇಳಿದ ಕೂಡಲೆ
ಹುಳುಗಳು ಹಿಡಿದು ಹೊಲಸುಗಲ್ಲಿಗಳಲ್ಲಿ ಬಿಟ್ಟರು,
ಅವು ಹಿಂತಿರುಗಿ ಬರುವ ದಾರಿ ಕಾಯುತ್ತ

೧೩. ಓದಿ ಅಳುವುದು – ಡಾ. ಕಾಶಿನಾಥ ಅಂಬಲಗೆ ಪುಟ ಸಂ. ೩೧

ಗಲ್ಲಿಯ ಹೊರಗೆ ಆಸನ ಹಾಕಿ ಕುಳಿತರು
ಹುಳುಗಳು ಕೊಬ್ಬಿ ಹೋದಾಗ ಜನ ಗಲ್ಲಿ ಬಿಟ್ಟು ಓಡತೊಡಗಿದರು
ಇವರು ಆಸನ ಹೊತ್ತುಹೊರಟರು[೧೪]

ಎನ್ನುವಲ್ಲಿಯೂ ಹಾಗೂ ಸಾರ್ವಜನಿಕ ಜೀವನದಲ್ಲಿ ಬಡವರ ಸಹಾಯಕ್ಕಿರುವ ಹಲವು ಯೋಜನೆಗಳ ಅನುಷ್ಠಾನದಲ್ಲಿ, ಅವುಗಳಿಗಂಟಿಕೊಂಡಿರುವ ರಾಜಕೀಯ ಕೀಟಾಣುಗಳು ಅವ್ಯವಹಾರದ ಸಾಮಾಜಿಕ ಸೊಂಕು ಭಯಂಕರವಾಗಿರುವುದನ್ನು ಇಲ್ಲಿ ಕಾಣಬಹುದು. 'ಗರೀಬಿ ಹಟಾವ್ರೋ' ಕೇಳಿದ ಕೂಡಲೆ ಅವರು ದೊಡ್ಡದೊಡ್ಡ ನಕಾಶೆ ತಯ್ಯಾರಿಸಿ ಅಂಕೆ ಸಂಖ್ಯೆ ಜಮಾಯಿಸಿ ಬಾಯಿಪಾಠ ಮಾಡುವುದು ಹಾಗೂ ನಕಾಶೆಗಳ ವೇಷ ತೊಟ್ಟುಕೊಂಡು ಸಾಲಾಗಿ ನಿಲ್ಲುವುದನ್ನು, ಅದಕ್ಕಾಗಿ ತಾಲೀಮು ಮಾಡುವುದನ್ನು ನಾವಿಲ್ಲಿ ಕಾಣುತ್ತೇವೆ. ಆದರೆ ಇದರಿಂದ 'ಗರೀಬಿ ಹೋಯಿತೆ?' ಮತ್ತೆ ದುಡಿದ ಜನರಸ್ಥಿತಿ ಹಾಗೆಯೇ ಉಳಿದಿರುವುದು ಇಲ್ಲಿಯ ವ್ಯಂಗ್ಯವೆಂಬುದನ್ನು ಕವನ ಸ್ಪಷ್ಟಪಡಿಸುತ್ತದೆ.

ಕಾವ್ಯಾನುವಾದಗಳ ಮೂಲಕ ಅಂಬಲಗೆಯವರು ಕಾವ್ಯಕ್ಕಿಂತ ಬದುಕಿಗೆ ಹೆಚ್ಚು ಬದ್ಧರಾಗಿರುವುದನ್ನು ಕಾಣಬಹುದು. ಅಂತೆಯೇ ಅವರಿಗೆ ಇಲ್ಲಿಯ ಕವನಗಳಲ್ಲಿ ಬಡತನ ಜಾತೀಯತೆ, ರಾಜಕೀಯ ಹಾಗೂ ಭ್ರಷ್ಟಾಚಾರಗಳು ಮೇಲಿಂದ ಮೇಲೆ ಕಾಡುತ್ತವೆ. ಇಂದಿನ ಪ್ರಜಾಪ್ರಭುತ್ವದಲ್ಲಿಯೂ ಈಗ ಕೊಲೆಗಳಾಗುವುದನ್ನು 'ರಾಜರ ರಕ್ಷಣೆ' ಕವನ ವಿವರಿಸುತ್ತದೆ.

ಒಂದಾನೊಂದು ಕಾಲದಲ್ಲಿ
ಅನೇಕ ರಾಜರಿದ್ದರು
ಅವರ ಕೃಪಾಪೇಕ್ಷಿತರೂ ಅನೇಕರಿದ್ದರು
ರಾಜರು ರಾಜರ ಕೊಲೆ ಮಾಡುತ್ತಿದ್ದರು
ಪರಸ್ಪರ ಕೃಪಾ ಪೋಷಿತರೂ ಕೊಲೆಯಾಗುತ್ತಿದ್ದರೂ
ಪ್ರಜಾಪ್ರಭುತ್ವದಲ್ಲಿಯೂ ಈಗ ಕೊಲೆಯಾಗುತ್ತದೆ
ಕೃಪಾ ಪೋಷಿತರಲ್ಲದವರ ಪ್ರಪ್ರಥಮದಲ್ಲಿ ಕೊಲೆಗಳಾಗುತ್ತವೆ[೧೫]

ಅಂದಿನ ರಾಜರ ಕೊಲೆಯಲ್ಲಿ ನಡೆದ ಷಡ್ಯಂತ್ರಗಳನ್ನು ಕುರಿತು ಕವಿಗಳು ಅವರ ಗೌರವ ಗಾಥೆಯನ್ನು ರಚಿಸುತ್ತಿದ್ದರು. ಅದನ್ನು ಜನತೆ ಪ್ರೀತಿಯಿಂದ ಕೇಳುತ್ತಿದ್ದರು. ಆ ಗ್ರಂಥಗಳು ಸಾಹಿತ್ಯಬಂಡಾರ ತುಂಬಿ ಅವು ಅವರನ್ನು ಕೀರ್ತಿಸುತ್ತಿದ್ದವು. ಆದರೆ ಈಗ

---

೧೪. ಓದಿ ಅಳುವುದು – ಗರೀಬಿ ಹಟಾವ್ರೋ ಪುಟ ಸಂ. ೩೪

೧೫. ಓದಿ ಅಳುವುದು – ರಾಜ ರಕ್ಷಣೆ ಪುಟ ಸಂ. ೫೩

ಪ್ರಜಾಪ್ರಭುತ್ವದಲ್ಲಿಯಾರಾದರೂ ಸತ್ತರೆ ಅವರು ವಾಸ್ತವದಲ್ಲಿ ಕೊಲೆಯೇ ಆಗಿರುವದು ಗಮನಾರ್ಹ ಅಂಶವಾಗುತ್ತದೆ. ಇಂದು ರಾಜರು ಎಂದಿಗಿಂತಲೂ ಸುರಕ್ಷಿತವಾಗಿರುವದನ್ನು ಈ ಕವನ ತಿಳಿಸುತ್ತದೆ. ಅಂತಹ ರಾಜರುಗಳಲ್ಲಿ ಯಾರಾದರೂ ಇಂದು ಸತ್ತಿದ್ದರೆ ಅವರು ವೃದ್ಧರಾಗಿ ಮಾತ್ರ ಸಾಯುತ್ತಿರುವ ಸತ್ಯ ಸಂಗತಿಯನ್ನು ಈ ಕವನ ವಿವರಿಸುತ್ತದೆ. ಇಂದು

ರಾಜರಿಂದ ಬಲುದೂರ
ಆದರೆ ಜನತೆಯ ತೀರ ಹತ್ತಿರ
ತುಂಬಿದ ಬೀದಿಯಲ್ಲಿ ಆಯ್ದ ಬಡಜನರ
ಕೊಲೆ ಮಾಡಲಾಗುತ್ತದೆ[೧೬]

ಈ ಮೂಲಕ ರಾಜರನ್ನು ರಕ್ಷಿಸಲಾಗುತ್ತಿರುವ ವಾಸ್ತವಿಕ ಸಂಗತಿಯು ಈ ಕವನದ ವಸ್ತುವಾಗಿದೆ. ಕಾವ್ಯತ್ವಕ್ಕಿಂತ ಬದುಕು ಮುಖ್ಯವಾಗಿರುವ ಈ ಕವನದಲ್ಲಿ ಡಾ. ಅಂಬಲಗೆಯವರ ಧೋರಣೆ ತನ್ನಿಂದ ತಾನೇ ಪ್ರಕಟವಾಗಿ ನಿಲ್ಲುತ್ತದೆ. ಭಾರತ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕು ಅರ್ಧ ಶತಮಾನ ಕಳೆದಿರುವ ಈ ಹಂತದಲ್ಲಿ ನಿಂತು ಪ್ರಜ್ಞಾವಂತ ಕವಿಯಾಗಿರುವ ಅಂಬಲಗೆಯವರು 'ಸ್ವಾತಂತ್ರ್ಯ' ವನ್ನು ಕುರಿತು ಚಿಂತನೆ ಮಾಡುತ್ತಿರುವುದು ತುಂಬಾ ಪ್ರಮುಖ ವಿಷಯವೆನ್ನಬಹುದು. ಸ್ವಾತಂತ್ರ್ಯ ಸಿಕ್ಕದ್ದು ಯಾರಿಗೆ ಅದರ ಪ್ರಯೋಜನವಾಗಿದೆ. ಇಂದಿನ ವಾಸ್ತವಿಕ ಬದುಕಿನಲ್ಲಿ ಆ ಸ್ವಾತಂತ್ರ್ಯದ ವೈಪರಿತ್ಯವನ್ನು ಕಾಣುವ ಡಾ. ಅಂಬಲಗೆಯವರಿಗೆ ಅದು ಒಂದು ತೆರನಾಗಿ ಕಾಡುತ್ತಿದೆ ಅಷ್ಟೇ ಅಲ್ಲ ಅವರನ್ನು ಅದು ಕಾವ್ಯ ಕಟ್ಟಲು ಮತ್ತು ಆ ಮೂಲಕ ಆದ್ದರಿಂದ ತೇಗುತ್ತಿರುವ ವ್ಯವಸ್ಥೆಯನ್ನು ಚುಚ್ಚಲು ಪ್ರಯತ್ನಿಸಿದೆ.

ಬಹುದೊಡ್ಡ ದೇಶದಲ್ಲಿ
ಬಹಳಷ್ಟು ಜನರು ನೋವುಗಳು
ಅವರನ್ನು ದೊಡ್ಡವರನ್ನಾಗಿಸದಿದ್ದಲ್ಲಿ
ನೆಲವನ್ನು ಅದರ ಹಂತಕರು ಸಣ್ಣದಾಗಿಸುತ್ತಾರೆ[೧೭]

ಕಾಡು, ಬೆಟ್ಟ, ಹಸಿರು ಮೈದಾನ ಹಾಗೂ ಪ್ರಾದೇಶಿಕ ವಿಶಾಲತೆಯಿಂದ ಕೂಡಿರುವ ಈ ದೇಶದ ಇತಿಹಾಸ ಬಹುದೊಡ್ಡದು. ಅಲ್ಲಿ ಇದರ ವಿಶಾಲವಾದ ಗುಣಗಾನವಿದೆ ದೊಡ್ಡದೆನ್ನಿಸಿರುವ ಈ ದೇಶದ ಗೌರವ ಪ್ರತಿಷ್ಠೆಗಳು ವಿದೇಶಗಳಲ್ಲಿಯೂ ಹೆಚ್ಚಿದ್ದು ಅದು ಈ ದೇಶದ ಪ್ರಜೆಗಳ ವ್ಯಕ್ತಿತ್ವವನ್ನು ಅವಲಂಬಿಸಿ ನಿಂತಿರುವುದು ಹಿಂದೊಮ್ಮೆ ಅತ್ಯುನ್ನತವಾದ ಮಾನವೀಯ ಮೌಲ್ಯಗಳನ್ನು ಮೆರೆದಿರುವ ಈ ದೇಶವು ಪ್ರಪಂಚಕ್ಕೆ

---

೧೬. ಓದಿ ಅಳುವುದು – ಡಾ. ಕಾಶಿನಾಥ ಅಂಬಲಗೆ ಪುಟ ಸಂ. ೫೪

೧೭. ಓದಿ ಅಳುವುದು – ಡಾ. ಕಾಶಿನಾಥ ಅಂಲಗೆ ಪುಟ ಸಂ. ೫೩

ಮಾದರಿ ಸ್ಥಾನದಲ್ಲಿತ್ತು. ಆದರೆ ಈಗ ದೇಶದಲ್ಲಿನ ಬರ್ಬರತೆ ಹತ್ಯೆಗಳ ಬಡತನ ರಕ್ತಪಾತಗಳು ಮತ್ತು ಕೊಳಕುತನ ಇವು ಇಂದು ಭಾರತೀಯ ಸಂಸ್ಕೃತಿಯ ಮೌಲ್ಯಗಳಾಗಿವೆ.

ಭೂಮಿಯನ್ನು ಆಳವಾಗಿ ಅಗೆದಿದ್ದಾರೆ ಲೂಟಿಮಾಡುವದಕ್ಕೆ
ಅದರಲ್ಲಿ ಎಲ್ಲೋ ಒಂದು ಬೀಜವಿತ್ತು
ಅದನ್ನು ತನ್ನ ಕೈಯಲ್ಲಿ ಎತ್ತಿಕೊಳ್ಳಲು
ಜೊತೆಗೇ ಆ ಮಣ್ಣನ್ನು ಸಹ:
ನಾವು ನಮ್ಮ ಭೂಗೋಲವನ್ನೇ ಮರೆತ್ತಿದ್ದೇವೆ
ಪ್ರತಿಯೊಂದು ಕೊಲೆಯು ನಮ್ಮಿಂದ ಸ್ವಲ್ಪ ದೂರದಲ್ಲಿ
ನಡೆದಂತೆ ಕಾಣಿಸುತ್ತದೆ[೧೮]

ಎಂಬಲ್ಲಿ ಸ್ವತಂತ್ರ ಭಾರತದ ಪರಿಸ್ಥಿತಿಗೆ ಕನ್ನಡಿ ಹಿಡಿಯುತ್ತದೆ ಈ ಕವನ ಕೊಲೆ ಹತ್ತಿರದಲ್ಲಿ ನಡೆದಿದ್ದರೂ ಹೆಣಗಳ ಮುಖಗಳು ನೆನಪಿನಲ್ಲಿ ಉಳಿಯುವದಿಲ್ಲ ಬದುಕಿದ್ದಾಗ ಅವರ ಚಿತ್ರಗಳು ಎಲ್ಲಿಯೂ ಅಚ್ಚಾಗಿರಲಿಲ್ಲವೆನಿಸುತ್ತದೆ. ಆದರೆ ಹೆಣಗಳ ಬಳಿಯಲ್ಲಿ ದುಃಖದಲ್ಲಿ ನಿಂತಿದ್ದ ಆ ಸುಂದರ ಮುಖ ಮತ್ತೆ ಮತ್ತೆ ಕಣ್ಣಿಗೆ ರಾಚುವ ಚಿತ್ರ ಇಲ್ಲಿದೆ.

ಶವವಸ್ತ್ರವನ್ನು ಹೊದ್ದ ಮುಖಗಳೇ
ಒಂದುಗೂಡಿ ಬದುಕಿದ್ದ ಅಳಿದುಳಿದ ಕೆಲವು ಪ್ರಮಾಣಗಳಾಗಿವೆ
ಆದರೆ ಅವನ್ನು ನೆನಪಿಟ್ಟುಕೊಳ್ಳಲಾರದ ಮುಖಗಳಿಲ್ಲದ ಜನರೆ
ಆಳುತ್ತಿದ್ದಾರೆ ಸಮಾಜವನ್ನು
ನಾಳೆ ಗುಲಾಮರಾಗುವೆವು ನಾವು ಇನ್ನೊಂದು ದೊಡ್ಡದೇಶಕೆ
ನಮ್ಮ ದೇಶದ ಹಾಳುಬಿದ್ದ ನೆಲದಲ್ಲಿ ಹುಡುಕುತ್ತಿರುತ್ತೇವೆ
ನಾವು ನಮ್ಮ ಮುಖವನ್ನು
ಸ್ವಾತಂತ್ರ್ಯವನ್ನು[೧೯]

ಭಾರತದ ಸ್ವಾತಂತ್ರ್ಯದ ನಂತರ ಇಲ್ಲಿಯ ಬದುಕಿನ ಬದಲಾವಣೆಯ ಕನಸುಗಳನ್ನು ಕಾಣು ಕವಿಗೆ, ಇಲ್ಲಿ ಘಟಿಸುತ್ತಿರುವ ವಿದ್ಯಮಾನಗಳು ಆತನ ಪ್ರಜ್ಞಾವಂತಿಕೆಯನ್ನು ಕೆಣಕಿರುವುದನ್ನು ಈ ಕವನದಲ್ಲಿ ಮನಗಾಣಬಹುದಾಗಿದೆ. ಇದೇ ಭಾವನೆಯ ವೈರುಧ್ಯತೆಯಲ್ಲಿ ಮೂಡಿನಿಂತಿರುವ ಸ್ವತಂತ್ರ ವ್ಯಕ್ತಿ ಕವನವು ಸಹ ಇಲ್ಲಿ ಗಮನಾರ್ಹವಾಗುತ್ತದೆ.

---

೧೮. ಓದಿ ಅಳುವುದು – ಡಾ. ಕಾಶಿನಾಥ ಅಂಬಲಗೆ ಪುಟ ಸಂ. ೪೮

೧೯. ಓದಿ ಅಳುವುದು – ಡಾ. ಕಾಶಿನಾಥ ಅಂಬಲಗೆ ಪುಟ ಸಂ. ೪೯

ಈ ಕತ್ತಲೆಯಲ್ಲಿ ಆಗಾಗ
ಯಾರದೋ ಕವಿತೆ ಕಾಣಿಸಿಕೊಳ್ಳುತ್ತದೆ
ಮಿಂಚಿನಲ್ಲಿ ಮತ್ಯಾವನೋ ಕವಿ ಕಾಣಿಸಿಕೊಳ್ಳುತ್ತಾನೆ
ಏನಿಲ್ಲವೆಂದರೂ ನಾವು ಮೂವರಾದರೂ ಸಂಗಾತಿಗಳಾಗಿರುತ್ತೇವೆ[೨೦]

ಎಂಬುದು 'ರಘುವೀರ ಸಹಾಯ' ರ ಹಿಂದಿ ಕವನದ ಅನುವಾದವಾಗಿದೆ ಹಿಂದಿ ಛಾಯಾವಾದಿ ಕಾವ್ಯಧಾರೆಯ ವಿರುದ್ಧ ಬಂಡಾಯವೆದ್ದ ನವ್ಯ ಕವಿಗಳಲ್ಲಿ ಪ್ರಮುಖವಾಗಿರುವ ಇವರ ಕಾವ್ಯದಲ್ಲಿಯ 'ಆಕ್ರೋಶ' ವ್ಯಂಗ್ಯ ವಿಡಂಬನೆಗಳು ಅಂಬಲಗೆಯವರ ಅನುವಾದದಲ್ಲಿಯೂ ಉಳಿದು ಬಂದಿರುವುದನ್ನು ನಾವು ಕೆಳಗಿನ ಸಾಲುಗಳಲ್ಲಿ ಕಾಣಬಹುದಾಗಿದೆ.

ನಾನು ದ್ವೇಷಿಸುವ, ತಮ್ಮ ತಮ್ಮಲ್ಲೆ ಹೊಡೆದಾಡುವ
ಈ ಜನ ಒಂದಾದಲ್ಲಿ
ಉದ್ಧಟ ಸರಕಾರವನ್ನು ಬದಲಾಯಿಸುವದಕ್ಕೆ ಮೊದಲು
ತಮ್ಮನ್ನೇ ತಾವು ಬದಲಾಯಿಸಿಕೊಳ್ಳಲಿ
– – – – –– –– – – – – – – –
ಬನಿಯಾ ಬನಿಯಾ ಆಗಿರಲಿ, ಬ್ರಾಹ್ಮಣ ಬ್ರಾಹ್ಮಣನಾಗಿರಲಿ
ಕಾಯಸ್ಥಕಾಯಸ್ಥನಾಗಿರಲಿ
ಆದರೆ ಕವಿತೆ ಬರೆಯುವಾಗ ಅದು ಆಧುನಿಕವಾಗಿರಲಿ

ಎಂಬುದು ಕವಿಯ ಆಶಯ ಈ ಭಾವವನ್ನು ಇಂಥ ಅನುವಾದದ ಮೂಲಕ ಸೃಜನಶೀಲತೆಯೊಂದಿಗೆ ತರುವ ಕವಿಯು ಮುಂದಿನ ತಲೆಮಾರಿಗೆ ಹೊಸ ಸಾಧ್ಯತೆಗಳನ್ನು ತೆರೆದು ನಿಲ್ಲಿಸುತ್ತಾರೆ.

ಅಂಬಲಗಿಯವರು ಅನುವಾದಿಸಿದ ಜೀವನ ಪರವಾದ ಅನೇಕ ಕವಿತೆಗಳಲ್ಲಿ 'ಪುಸ್ತಕ ಓದಿ ಅಳುವುದು' ಎಂಬ ಕವನ ತಟ್ಟನೇ ಗಮನ ಸೆಳೆಯುತ್ತದೆ. ಈ ಭೂಮಿಯ ಮೇಲೆ ಯಾವುದೋ ಮೂಲೆಯಲ್ಲಿರುವ ವ್ಯಕ್ತಿಯ ನೋವಿಗೆ ಇಲ್ಲಿ ಪುಸ್ತಕದ ಮುಂದೆ ಕುಳಿತು, ನಮ್ಮ ಅಂತರಂಗ–ಬಹಿರಂಗದಲ್ಲಿ ಅಳುವದನ್ನು ಕಾವ್ಯದ ಓದು ಸಾಧ್ಯವಾಗಿಸುತ್ತದೆ.[೨೧]

ಪುಸ್ತಕಗಳನ್ನು ಓದಿ ನಾನು ಅತ್ತಿದ್ದೇನೆ
ಆದರೆ ಯಾವ ಪುಸ್ತಕವೆಂದು ಈಗ ಗೊತ್ತಿಲ್ಲ
ಬಹುಶ ಅದೊಂದು ಪರಸಂಗ ಇರಬಹುದು

---

೨೦. ಓದಿ ಅಳುವುದು – ಅನುವಾದಕನ ಮಾತು ಪುಟ ಸಂ. VII

೨೧. ಓದಿ ಅಳುವುದು – ಡಾ. ಕಾಶಿನಾಥ ಅಂಬಲಗೆ ಪುಟ ಸಂ. ೫೦

ಅದರಲ್ಲಿ ಅನೇಕ ಪಾತ್ರಗಳು ಹುಟ್ಟಿಕೊಳ್ಳುತ್ತಿದ್ದವು
ಹಾಗೂ ನಾಲ್ಕು ದಿಕ್ಕಿನಲ್ಲಿ ಕುಣಿಯುತ್ತಿದ್ದವು
ಓದುತ್ತ ಹೋಗುತ್ತಿದ್ದೆ ಹಾಗೂ ಅಳುತ್ತಿರುತ್ತಿದ್ದೆ[22]

ಎಂಬಂತಹ ಸಾಲುಗಳಲ್ಲಿ ಅದನ್ನು ಗುರುತಿಸಬಹುದಾಗಿದೆ. ಇಲ್ಲಿ ಕವಿಯು ಗಮನಿಸಿದಂತೆ ಓದುತ್ತಿರುವುದು ಬೇರೆ ಹಾಗೂ ಅಳುತ್ತಿರುವುದೇ ಬೇರೆಯಾಗಿದೆ. ಇಲ್ಲಿ ಪುಸ್ತಕದಲ್ಲಿ ವ್ಯಕ್ತವಾಗಿರುವುದು ವ್ಯಕ್ತಿಯೊಬ್ಬನ ಅಳುವು ಬೇರೆಯಾಗಿದೆ. ಇಲ್ಲಿ ಪುಸ್ತಕದಲ್ಲಿ ವ್ಯಕ್ತವಾಗಿರುವುದು ವ್ಯಕ್ತಿಯೊಬ್ಬನ ಅಳುವು ಆ ನೋವನ್ನು ಕುರಿತು ಆಲೋಚಿಸಿದಾಗ ಅಥವಾ ಅದನ್ನು ಕುರಿತು ಓದಿದಾಗ ಅನಿಸುವ ಭಾವನೆಯು ಈ ಜಗತ್ತಿನ ಸ್ಥಿತಿ ತಾನೆ? ಈ ಸಂದರ್ಭವು ಹೃದಯವಂತ ಓದುಗನಿಗೆ ಅಳುವ ಶಕ್ತಿಯನ್ನು ನೀಡುವಷ್ಟು ತೀವ್ರವಾಗಿರುವುದನ್ನು ಈ ಕವನ ತೋರಿಸುತ್ತದೆ. 'ರಘುವೀರ ಸಹಾಯ ಕವನ ಓದುಗನಿಗೆ ಹೊರ ಜಗತ್ತಿನಿಂದ ಬಂದನೋವನ್ನು ನೀಡುವಷ್ಟು ಶ್ರೇಷ್ಠ ಅಭಿವ್ಯಕ್ತಿ ತಂತ್ರವನ್ನು ಒಳಗೊಂಡಿದ್ದು, ಡಾ. ಅಂಬಲಗೆಯವರೂ ಸಹ ತಮ್ಮ ಅನುವಾದದಲ್ಲಿ ಅದನ್ನು ಉಳಿಸಿಕೊಂಡಿರುವುದನ್ನು ಕಾಣಬಹುದು. ಹಲವು ದೃಷ್ಠಿಯಲ್ಲಿ 'ಓದಿ ಅಳುವುದು' ಸಂಕಲನವು ಇಂದಿನ ಬದುಕಿನ ಜನಪರ ನಿಲವುಗಳಿಗೆ ಬದ್ಧವಾಗಿರುವ ಕೃತಿಯಾಗಿದ್ದು, ಇಲ್ಲಿ ಕವಿಗಳು ಬಹಳಷ್ಟನ್ನು ಸಾಧಿಸಿರುವುದನ್ನು ಅರಿಯಬಹುದಾಗಿದೆ. ಇಲ್ಲಿ ಹುದಗಿರುವ ಮಾನವೀಯ ಬದುಕಿಗೆ ಅವಶ್ಯವಿರುವ ಆರೋಗ್ಯಕರ ಆಶಯಗಳನ್ನು ಕುರಿತ ಚಿಂತನೆಗಳು ಸದಾ ಹೊಳೆಯುವದನ್ನು ಗುರುತಿಸಬಹುದಾಗಿದೆ ಎನ್ನಬಹುದು.

ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಕಾಲಕಾಲಕ್ಕೆ ಆಗಿರುವ ಸಾಂಸ್ಕೃತಿಕ ಪರಿವರ್ತನೆಯ ಅನ್ಯ ಸಂಸ್ಕೃತಿಯ ಸಂಸರ್ಗದಿಂದ ಹೇಗೆ ಉಂಟಾಗಿದೆ? ಎಂಬುದನ್ನು ಕಂಡು ಹಿಡಿಯುವಲ್ಲಿ ಹಾಗೂ ನಮ್ಮದೇ ಆದ ಇನ್ನೊಂದು ಜನಾಂಗದ ಪರಿಸರವನ್ನು ಅರ್ಥಮಾಡಿಕೊಳ್ಳುವ ರೀತಿಯಲ್ಲಿ ಈ 'ಅನುವಾದ ಸಾಹಿತ್ಯ'ವು ತುಂಬಾ ಪ್ರಧಾನವಾಗುತ್ತದೆ. ಅದರಲ್ಲೂ ಕನ್ನಡ ಕಾವ್ಯ ಸಾಹಿತ್ಯದ ಪರಿವರ್ತನೆಯ ಕಾಲದಲ್ಲಿ ಕಾವ್ಯಾನುವಾದಗಳ ಸ್ಥಾನ ಇನ್ನೂ ಹಿರಿದಾಗಿ ನಿಲ್ಲುವುದನ್ನು ಈ ಕಾವ್ಯಗಳ ಮೂಲಕ ನಾವಿಲ್ಲಿ ಅರಿಯಬಹುದು.

ಅಧ್ಯಾಯ : ೪

## ಸಮಕಾಲೀನ ಅನುವಾದಕರಲ್ಲಿ ಡಾ. ಕಾಶೀನಾಥ ಅಂಬಲಗೆಯವರ ಸ್ಥಾನಮಾನ

'ಅನುವಾದ ಸಾಹಿತ್ಯವು' ಕನ್ನಡದಲ್ಲಿ ಈಗ ಒಂದು ಚಳುವಳಿಯ ರೂಪದಲ್ಲಿ ಕಾಣಿಸಿಕೊಳ್ಳದೇ ಇದ್ದರೂ ಸಹ, ಅದೊಂದು ಚಲನಾತ್ಮಕ ನದಿಯಾಗಿ ಹರಿಯುವುದನ್ನು ಗುರುತಿಸಬಹುದು. ಆ ನದಿಗೆ ಒಂದು ಹಳ್ಳವಾಗಿ ಸೇರಿ ಹರಿಯುತ್ತಿರುವವರು ಡಾ. ಕಾಶಿನಾಥ ಅಂಬಲಗೆಯವರು.

ಕನ್ನಡ ಮತ್ತು ಹಿಂದೀ ಭಾಷಪಂಡಿತರಾಗಿರುವ ಡಾ. ಕಾಶೀನಾಥರು ಸೃಜನಶೀಲ ಮನಸ್ಸಿನವರು. ಬಂಡಾಯ ಮನೋಧರ್ಮವುಳ್ಳ ಬೀದರ ನೆಲದ ಪ್ರಗತಿಪರ ಕವಿ. ಶರಣ ಸಾಹಿತ್ಯದ ತತ್ವ ಸಿದ್ಧಾಂತಗಳನ್ನು, ಅದರ ನೈಜ್ಯ ಆಚಾರ–ವಿಚಾರಗಳನ್ನು ಅರ್ಥೈಸಿಕೊಂಡು ಬಾಳುತ್ತಿರುವ ಇವರು ಹಿಂದೀ ಹಾಗೂ ಪಂಜಾಬೀ ಕಾವ್ಯಗಳಲ್ಲುಂಟಾ ಆಧುನಿಕತೆಯನ್ನು ತಮ್ಮ ಕಾವ್ಯಗಳಲ್ಲಿ ದುಡಿಸಿಕೊಂಡಿದ್ದಾರೆ. ಹಿಂದೀ ಸಾಹಿತ್ಯದಲ್ಲುಂಟಾದ ಛಾಯಾವಾದ ಪ್ರಗತಿವಾದ, ನಯೀಕವಿತಾ, ಅಕವಿತಾ, ಪ್ರತಿಭಟನಾ ಕವಿತೆ ಹಾಗೂ ೧೯೬೦ ರ ದಶಕದಲ್ಲುಂಟಾದ ಪಂಜಾಬಿನ ಪರಿಸ್ಥಿತಿಯ ಹಿನ್ನಲೆಯಲ್ಲಿ ಸೃಷ್ಟಿಗೊಂಡ ಅಲ್ಲಿಯ ಕಾವ್ಯಸಾಹಿತ್ಯದ ಪ್ರಭಾವಕೊಳಗಾಗಿದ್ದಾರೆ. ಅದರಲ್ಲೂ ರಾಮಸಿಂಹ ದಿನಕರ, ಸುಮಿತ್ರಾನಂದನಪಂತ, ಮಹಾದೇವಿ ವರ್ಮಾ, ಆಜ್ಞೇಯ, ಧೂಮಿಲ, ನಾಗಾರ್ಜುನ, ಕೇದಾರನಾಥ ಅಗರವಾಲ, ದಯಾಲ ಸಕ್ಸೇನಾ, ನರೇಶ ಮೆಹತಾ, ರಘುವೀರ ಸಹಾಯ, ಕೇದಾರನಾಥ ಸಿಂಹ, ಮಂಗಲೇಶ, ದುಷ್ಯಂತ ಕುಮಾರ, ರಾಣಿ ಮೊದಲಾದ ಹಿಂದೀ ಕವಿಗಳ ಹಾಗೂ ಪಾಶ, ಮಿಂದರ, ಸುರಜೀತ ಪಾತ್ರ, ಆತ್ಮಸಿಂಹ, ಸರೋದ ಸುದೀಪ, ರಾಮಸಿಂಹ ಚಾಹಲರಂತಹ ಪಂಜಾಬಿ ಕಾವ್ಯ ಪ್ರಭಾವೀ ಕವಿಗಳ ಕಾವ್ಯದಿಂದ ಪ್ರೇರಿತಗೊಂಡಿದ್ದಾರೆ. ಅಲ್ಲಿರುವ ಬಂಡಾಯ ಮನೋಧರ್ಮದ ಪ್ರತಿರೂಪದಂತಿರುವ ಕವನಗಳನ್ನು ಭಾಷಾಂತರಿಸುವ ಮೂಲಕ ಕನ್ನಡದಲ್ಲಿ ತಮ್ಮ ಸ್ಥಾನ–ಮಾನವನ್ನು ಹೆಚ್ಚಿಸಿಕೊಂಡಿದ್ದಾರೆ.

ಮಾನವೀಯ ನೆಲೆಯುಳ್ಳ ಡಾ. ಅಂಬಲಗೆಯವರ ಅನುವಾದ ಕವನಗಳು ಸಮಾಜದಲ್ಲಿಯ ಜೀವವಿರೋಧಿ ಶಕ್ತಿಗಳ ವಿರುದ್ಧ ಪ್ರತಿಭಟನೆಗೈಯ್ಯುತ್ತಿದ್ದು, ಗಮನಾರ್ಹವಾಗುತ್ತವೆ. ಬದುಕನ್ನು ಪ್ರೀತಿಸುವ ಇಲ್ಲಿಯ ಅನುವಾದಿತ ಕವನಗಳಲ್ಲಿ ತನ್ನದೇ ಆದ ಒಂದು ವಿಶಿಷ್ಟತನವಿದ್ದು, ನಮ್ಮ ದೇಶದ ಒಂದು ಸಂಸ್ಕೃತಿಯನ್ನು ಪ್ರತಿ ಸಂಸ್ಕೃತಿಯೊಂದಿಗೆ ಸಮೀಕರಿಸಲು ಪ್ರಯತ್ನಿಸುತ್ತಿರುವುದು ಎದ್ದು ಕಾಣುವ ಗುಣವಾಗಿದೆ.

ದೇಶದ ಒಂದು ಮೂಲೆಯಲ್ಲಿ ನಡೆದ ನೋವಿನ ತೀವ್ರತೆಯನ್ನು ಅನ್ಯಾಯದ ಅಟ್ಟಹಾಸವನ್ನು ರಕ್ತಗಟ್ಟಿದ ಒಂದು ವ್ಯವಸ್ಥೆಯನ್ನು ಪ್ರತಿಭಟನಾತ್ಮಕವಾಗಿ ಬರೆಯುವ ಕಾಲಪ್ರಜ್ಞೆಗಳಿಗೆ ಸ್ಪಂದಿಸುವ 'ಬಿದಿರಿ' ಭಾಷಾ ವೈಶಿಷ್ಟ್ಯವನ್ನು ಪ್ರಚುರ ಪಡಿಸುವ ಒಬ್ಬ ಹೃದಯವಂತ ಕವಿಯಾಗಿ ಇಲ್ಲಿ ಡಾ. ಕಾಶಿನಾಥ ಅಂಬಲಗೆಯವರು ಕಾಣಿಸುತ್ತಾರೆ.

ಕರ್ನಾಟಕ 'ಅನುವಾದ ಸಾಹಿತ್ಯ' ಪರಂಪರೆಯಲ್ಲಿ ಅನೇಕ ಪ್ರಮುಖ ಹೆಸರುಗಳನ್ನು ನಾವಿಂದು ಕಾಣುತ್ತೇವೆ. ಡಾ. ಪ್ರಧಾನ ಗುರುದತ್ತ ಡಾ. ತಿಪ್ಪೇಸ್ವಾಮಿ, ಪಂಚಾಕ್ಷರಿ ಹಿರೇಮಠ, ಡಾ. ಶರೇಶ ಚಂದ್ರ ಚುಳುಕೀಮಠ, ಡಾ. ಗಿರಡ್ಡಿ ಗೋವಿಂದರಾಜ, ಇಟಗಿ ಈರಣ್ಣ, ಡಾ. ವಿಜಯಾ ಸುಬ್ಬರಾಜ, ಡಾ. ಬಸವರಾಜ ಕುಂಬಾರ. ಡಾ. ಟಿ.ಜಿ. ಪ್ರಭಾಶಂಕರ ಪ್ರೇಮಿ ಮುಂತಾದವರು ಅತ್ಯಂತ ಪ್ರಮುಖರು. ಅದರಲ್ಲೂ ಶಾಂತರಸ, ಪ್ರೊ. ಬಾಲಚಂದ್ರ, ಜಯಶೆಟ್ಟಿ, ಪ್ರೊ. ವೀರೇಂದ್ರ ಸಿಂಪಿ, ಆರ್.ಕೆ. ಹುಡಗಿ, ಬಂಡೆಪ್ಪ ಖೂಬಾ ಅವರು ಹೈದ್ರಾಬಾದ ಕರ್ನಾಟಕದ ಭಾಷಾಂತರಕಾರರೆನಿಸಿದ್ದು ಇವರಲ್ಲಿ ಎದ್ದು ಕಾಣುವವರು ಡಾ. ಕಾಶೀನಾಥ ಅಂಬಲಗೆಯವರು ಎನ್ನಬಹುದು.

ಶಾಂತರಸರು 'ಉಮ್ರಾವಜಾನ' ಅದಾ ಎಂಬುದನ್ನು ಉರ್ದುವಿನಿಮದ ಕನ್ನಡಕ್ಕೆ ಅನುವಾದಿಸಿದರು ಇದನ್ನು ಕೇಂದ್ರ ಸಾಹಿತ್ಯ ಅಕಾಡೆಮಿಯು ಪ್ರಕಟಿಸಿದೆ. ಪ್ರೊ. ಆರ್.ಕೆ. ಹುಡಗಿಯವರು ನಾಸೀಕ ನಾನೇಕ ಎಂಬ ಕೃತಿಯನ್ನು ಪ್ರಕಟಿಸಿದ್ದು ಇಂಗ್ಲೀಷನಿಂದ ಕನ್ನಡಕ್ಕೆ ಅನೇಕ ಪ್ರಗತಿಪರ ಕೃತಿಗಳನ್ನು ಅನುವಾದಿಸಿದ್ದಾರೆ. ಪ್ರೊ. ಬಾಲಚಂದ್ರ, ಜಯಶೆಟ್ಟಿಯವರು ಕನ್ನಡದ ಶ್ರೇಷ್ಠವಚನಕಾರರಾದ ಜೇದರ ದಾಸಿಮಯ್ಯ, ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು, ಚನ್ನಬಸವಣ್ಣ, ಅಮುಗೆರಾಯಮ್ಮ ಮೊದಲಾದವರ ವಚನಾನುವಾದವನ್ನು, ಡಾ. ಸಿದ್ಧಯ್ಯ ಪುರಾಣಿಕರ ಮಹಾದೇವಿ ಕೃತಿಯನ್ನು, ತೀ.ನಂ. ಶ್ರೀಯವರ – 'ಭಾರತೀಯ ಕಾವ್ಯಮೀಮಾಂಸೆ'ಯನ್ನು ಜಿ.ಎಸ್. ಶಿವರುದ್ರಪ್ಪನವರ 'ಕಾವ್ಯಾರ್ಥಚಿಂತನೆ', ಎಸ್.ಎಲ್. ಭೈರಪ್ಪನವರ 'ಅಂಚು', ಯು.ಆರ್. ಆನಂತಮೂರ್ತಿಯವರ 'ಭಾರತೀಪುರ' ಮುಂತಾದವುಗಲನ್ನು ಹಿಂದೀ ಭಾಷೆಗೆ ಅನುವಾದಿಸಿರುವವರು ಬಿ.ಎಸ್. ಖೂಬಾರವರು ಭಾರತದ ವಿವಿಧ ಬಾಷೆಗಳ ಕಥೆಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಆದರೆ ಕಾವ್ಯಾನುವಾದಗಳ ದೃಷ್ಟಿಯಿಮದ ಹಿಂದೀ ಹಾಗೂ ಪಂಜಾಬಿ ಕವಿತೆಗಳನ್ನು ಕನ್ನಡಕ್ಕೆ ಅನುವಾದ ಮಾಡಿದ ಅಂಬಲಗೆಯವರು ಇಲ್ಲಿ ವಿಶಿಷ್ಟವಾಗಿ ನಿಲ್ಲುತ್ತಾರೆ ಎನ್ನಬಹುದು.

೧೯೭೦ ರಿಂದ ಇಂದಿನವರೆಗೆ ಬರವಣಿಗೆಯಲ್ಲಿ ತೊಡಗಿರುವ ಡಾ. ಕಾಶೀನಾಥರದು ಉತ್ಸಾಹೀ ಬದುಕು ಹೈದ್ರಾಬಾದ ಕರ್ನಾಟಕದ ಆಧುನಿಕೋತ್ತರ ಕನ್ನಡ ಸಾಹಿತ್ಯದಲ್ಲಿ ಎದ್ದು ಕಾಣಿಸುವ ಕವಿ ಕರ್ನಾಟಕದ ಕಿರೀಟದಂತಿರುವ ಬೀದರದ ಕೆಂಪುನೆಲ ಹಾಗೂ ಅಲ್ಲಿ ಹುಟ್ಟಿದ ವಚನಗಳು ಅವರಿಗೆ ಸದಾಸ್ಫೂರ್ತಿ, ಅಭಿಮಾನ ಹಾಗೂ ಹೋರಾಟದ ಬಲ

ಎಲ್ಲವೂ ಆಗಿವೆ೧ ಎಂಬುದು ಸತ್ಯ ಯಾಕೆಂದರೆ ಅಂಬಲಗೆಯವರು ಯಾವಾಗಲೂ ತಮ್ಮನ್ನು 'ಬಿದಿರಿ' ಎಂದೇ ಗುರುತಿಸಿಕೊಳ್ಳಲು ಹಾತೊರೆಯುತ್ತಾರೆ. ಬೀದರ ಜಿಲ್ಲೆಯ ಭಾಷೆ ಜೀವನಪರಿಯನ್ನು ಸದಾ ಪ್ರೀತಿಸುವ ಈ ಕವಿಯು ಆ ಸಂಸ್ಕೃತಿಯ ಹಿರಿಮೆ – ಗರಿಮೆಗಳನ್ನು, ಅಪರೂಪದ ಇಲ್ಲಿಯ ವಿಶಿಷ್ಟತೆಯನ್ನು ಮೈಗೂಡಿಸಿ ನಿಂತುಕೊಂಡಿದ್ದಾರೆ. ಬೀದರ ಪ್ರೇಮವನ್ನು ಎಂದೂ ಬಿಟ್ಟುಕೊಡದ ಅವರದು ಮೊಗಲಾಯಿ ಶೈಲಿ ಎಂಬುದನ್ನು ಗುರುತಿಸಿರುವ ಡಾ. ಮೀನಾಕ್ಷಿ ಬಾಳಿ ಯವರು ಅವರನ್ನು ಕುರಿತು ಬರೆಯುತ್ತ – ನಾವೆಲ್ಲ ಗೆಲೆಯರು ಬೀದರಿ ಕಭೀ ನಹಿ ಸುಧರೀ, ಸುಧರಿತೋ ಸುಧರಿ ನಹಿತೋ ಬೀದರಿ ಎಂದೆಲ್ಲಾ ಛೇಡಿಸಿದಾಗಲೂ ಅವರು ಹೃದಯ ತುಂಬಿ ದೊಡ್ಡದಾಗಿ ನಗುತ್ತಾರೆ. ಅಲ್‌ರಿ ಬೀದರ ರನ್ನನ ಗಧಾಯುದ್ಧದ ಗರಡಿಮನೆ, ಪಂಪನ ದೇಶಿಯ ತೊಟ್ಟಿಲು, ವಚನ ಕ್ರಾಂತಿಯ ಗಂಗೋತ್ರಿ, ಮಿತಾಕ್ಷರ, ಒಡ್ಡಾರಾಧನೆ ಇವೆಲ್ಲ ರಚನೆಯಾದದ್ದು ಈ ಬೀದರ ಕೆಂಪು ಮಣ್ಣಿನಲ್ಲಿಯೇ ಎಂದು ತಮ್ಮ ಟಿಪಿಕಲ್ ಮೊಗಲಾಯಿ ಶೈಲಿಯಲ್ಲಿ ವಾದಕ್ಕೆ ಇಳಿಯುತ್ತಾರೆ೨ ಎಂದು ಹೇಳಿರುವುದನ್ನು ಅವರೊಂದಿಗೆ ವಾದ ಮಾಡುವವರೆಲ್ಲರೂ ಕಾಣಬಹುದು.

ಬೀದರ ಭಾಷಾ ವೈಶಿಷ್ಟವನ್ನು ಇಲ್ಲಿಯ ಕವಿಗಳು ಹಾಗೂ ಸಾಹಿತಿಗಳೆಲ್ಲ ಮೈಗೂಡಿಸಿಕೊಂಡು ಬರೆಯಬೇಕೆಂದು ಸಾರುವ ಅಂಬಲಗಿಯವರು ಅಸ್ತಿತ್ವವಾದಿ ಕವಿ. ಈವರೆಗೆ ಅವರು ಪ್ರಕಟಿಸಿರುವ ನಾಲ್ಕು ಸೃಜನಶೀಲ ಕವನಸಂಕಲನ ಹಾಗೂ ಮೂರು ಅನುವಾದಿತ ಕವನ ಸಂಕಲನಗಳಲ್ಲಿ ಅವರ ಅಸ್ತಿತ್ವವಾದಿ ಧೋರಣೆಯನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದ್ದು ಈ ನಿಲುವುಳ್ಳ ಕವಿಗಳಲ್ಲಿಯೂ ಇವರು ಗಣನೀಯವಾಗುತ್ತಾರೆ. ಗದ್ಯ ಪ್ರಕಾರದ ಇವರ ಸಾಹಿತ್ಯವೂ ಶ್ರೇಷ್ಟವಾಗಿದ್ದು, ಈ ಭಾಗದಲ್ಲಿ ಇವರ ಇಷ್ಟು ಸಾಹಿತ್ಯರಾಶಿಯೂ ಇಲ್ಲಿ ದೊಡ್ಡದೆನಿಸುತ್ತಿದೆ. ಇಡೀ ದೇಶ ಸ್ವತಂತ್ರವಾಗಿ ಹೆಮ್ಮೆಪಟ್ಟ ಒಂದು ವರ್ಷ ಒಂದು ತಿಂಗಳ ನಂತರ ಸ್ವತಂತ್ರ ಅಸ್ತಿತ್ವ ಪಡೆದುಕೊಂಡಿರುವ ಈ ಪ್ರದೇಶವು ತಾಯಿನುಡಿ ಕನ್ನಡವನ್ನು ಹೊರತರಲು ಹೆಣಗಾಡುತ್ತಿತ್ತು. ಉಳಿದ ಭಾಗದ ಕರ್ನಾಟಕದಲ್ಲಿ ಸಾಹಿತ್ಯದಲ್ಲಿ ನವೋದಯ, ಆಧುನಿಕತೆ ಬಂದಿದ್ದರೆ, ಇಲ್ಲಿ ಉರ್ದುಮೀಡಿಯಂ ಪ್ರಮುಖವಾಗಿದ್ದವು. ಆ ವೇಳೆಯಲ್ಲಿ ನಾವು ಕನ್ನಡವನ್ನು ಕೇವಲ ಇಲ್ಲಿ ಬುಲಾಯಿ, ತತ್ವಪದ, ಹಂತಿಹಾಡು, ಗೊಂದಲಿಗರ ಕಥೆಗಳಲ್ಲಿ ಕೇಳುತ್ತಿದ್ದೆವು. ಇಂಥ ಹಲವು ರಾಜಕೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಒತ್ತಡಗಳ ಮಧ್ಯದಲ್ಲಿ ಈ ನೆಲದಲ್ಲಿ ಅಂಬಲಗೆಯಂಥಹ ಕವಿಗಳು ಹುಟ್ಟಿಕೊಂಡಿರುವುದು ಬಹು ಮುಖ್ಯ ಎನ್ನಬಹುದು. ನಿಜಾಂ ಪ್ರಭುತ್ವದಡಿಯಲ್ಲಿ ಸಿಲುಕಿ ನಲುಗಿದ್ದ ಬದುಕು ಬವಣೆಯನ್ನು ಅಕ್ಷರಗಳಲ್ಲಿ ಕಾಣಿಸುವಂತೆ ಮಾಡಿರುವ ಇಲ್ಲಿಯ ಕವನ ಪದ ಸಾಹಿತ್ಯವನ್ನು ಕಂಡು

---

೧. ಮೀನಾಕ್ಷಿ ಬಾಳಿ ಚುಳುಕಾದಿರಯ್ಯಾ – ೨೦೦೬ ಮುನ್ನುಡಿಯಲ್ಲಿ ಪುಟ ಸಂ. IV

ಖುಷಿ ಪಡುವ ಡಾ. ಕಾಶೀನಾಥರು ತಮ್ಮದೇ ಆದ ನಿರ್ಧಿಷ್ಟ ಗ್ರಹಿಕೆಗಳನ್ನು ಹೊಂದಿದ್ದು, ಬರವಣಿಗೆಯಲ್ಲಿ ಪ್ರಮುಖರೆನಿಸುತ್ತಾರೆ. ಚಾರಿತ್ರಿಕವಾದ ಇಂಥ ಒತ್ತಡಗಳ ಮಧ್ಯದಲ್ಲಿಯೂ ಮುಗ್ಧತನವನ್ನು ತಮ್ಮ ಬರವಣಿಗೆಯಲ್ಲಿ ಉಳಿಸಿಕೊಂಡಿರುವ ಈ ಕವಿಗೆ ಯಾವತ್ತೂ ಹೇಳಬೇಕಾದದ್ದು ಇಲ್ಲಿ ಅತಿ ಮುಖ್ಯ ಎನಿಸುತ್ತದೆ.

ಕೆಲವರು ಅಧಿಕಾರ ನಡೆಸಲು
ಗಡಿರೇಖೆ ಎಳೆಯುತ್ತಾರೆ.
ಹಲವರು ಅಧಿಕಾರ ಉಳಿಸಿಕೊಳ್ಳಲು
ಗಡಿರೇಖೆ ಮೀರುತ್ತಾರೆ
ಅಯ್ಯೋ!
ಅಧಿಕಾರ ನಡೆಸಲು ಗಡಿರೇಖೆ ಎಷ್ಟೊಂದು ಅವಶ್ಯಕ

ಎನ್ನುವಲ್ಲಿರುವ ಸರಳತೆ, ಮುಗ್ಧತೆಯನ್ನು ಗುರುತಿಸಬಹುದು. ಸೀಮೆ ಎರಡು ಗೋಧಿ ಬೆಳೆಯುವವನಿಗೂ ಗೋಧಿ ಖರೀದಿಸಬೇಕಾಗಿ ಬಂದಿರುವುದು ಈ ದೇಶದ ಪರಿಸ್ಥಿತಿ ಅಂಥವರಿಗೆ ಈ ದೇಶದಲ್ಲಿ ರೈತ ನೆಂದು ಕರೆಯುವುದನ್ನು ತಿಳಿಸುವ ಕವಿಯು ತಾನು ಒಲಿದಂತೆ ಹಾಡುವ ಹಾಗೂ ಆ ಉಪಕ್ರಮದಲ್ಲಿಯೇ ಕಾವ್ಯವನ್ನು ರಚಿಸುವ ಕ್ರಿಯೆಯನ್ನು ಮುಮದುವರೆಸಿಕೊಂಡು ಬಂದಿರುವುದು ಇಲ್ಲಿ ಎದ್ದು ಕಾಣುತ್ತಿದ್ದು ಆ ರೀತಿಯೆ 'ಶಾಂತರಸ' ರಂತಹ ಕವಿಗಳ ಹಿಂದೆ ಇವರು ನಡೆದಿರುವುದು ಎದ್ದು ಕಾಣುತ್ತದೆ.

ಜೀವನ್ಮುಖಿ ಸಂಘರ್ಷಗಳನ್ನು ಕಟ್ಟಿತೋರಿಸುವ ಕವಿಗಳು ನಮ್ಮಲ್ಲಿ ಹಲವರಿದ್ದರೂ ಸಹ, ಹೈದ್ರಾಬಾದ ಕರ್ನಾಟಕ ಭಾಗದಲ್ಲಿ ಡಾ. ಅಂಬಲಗೆಯವರು ಪ್ರಮುಖರೆನಿಸುತ್ತಿದ್ದಾರೆ. ಅವರ ಸಾವು, ಬದುಕು, ಯುದ್ಧದ ಕೆಲವು ಪ್ರಭಾವಗಳು, ಪಂಜಾಬ, ದೋಷ, ಇತಿಹಾಸ, ನನ್ನನ್ನು ನೋಡಬೇಡ ಕವಿತೆಯ ಗಡಿಪಾರು, ಲಾಹೋರ ರಸ್ತೆಯಲ್ಲಿ ಹೋಗುವಾಗ, ಆತಂಕದ ದಿನಗಳು, ಕೈ ಕಾಸಿಕೊಳ್ಳುತ್ತಾನೆ, ಭೂಮಿ, ಬೆಂಕಿ, ಪಾರ್ಲಿಮೆಂಟು, ದೇವರುಗಳಿಲ್ಲ, ನೋವುಗಳ ಕಟ್ಟಿಕೊಂಡವನು, ಬಂಡವಾಳ ಶಾಹಿ ಸಮಾಜ, ಗರೀಬಿ ಹಠಾವೋ ಸ್ವಾತಂತ್ರ್ಯ, ಪಂಜಾಬಿನ ಕವಿತೆಗಳು ಮುಂತಾದ ಡಾ. ಕಾಶೀನಾಥ ಅಂಬಲಗೆಯವರ ಅನುವಾದಿತ ಕವನಗಳು ಪ್ರಗತಿಪರ ಆಲೋಚನೆಗಳನ್ನು ಕಟ್ಟಿಕೊಡುತ್ತಿದ್ದು ಈ ದಿಸೆಯಲ್ಲಿ ಅವರನ್ನು ಪ್ರಮುಖವಾಗಿಸುತ್ತವೆ.

ಡಾ. ಕಾಶಿನಾಥ ಅಂಬಲಗೆಯವರ ಈ ಮೂರು ಕಾವ್ಯಾನುವಾದಗಳನ್ನು ಅಧ್ಯಯನ ಮಾಡಿದಾಗ ಹೆಚ್ಚು ಕಡಿಮೆ ಅಲ್ಲಿಯ ಎಲ್ಲ ಕಥೆಗಳು ಜೀವಪರವಾಗಿ ಮೂಡಿ ನಿಂತಿರುವುದನ್ನು ಕಾಣಬಹುದು. ಅವೆಲ್ಲವುಗಳಲ್ಲಿ ಸಾಮಾಜಿಕ ಪ್ರಜ್ಞೆ, ಕೆಳವರ್ಗದ ಮೇಲಿನ ಪ್ರೀತಿ, ಬಂಡಾಯ ಧೋರಣೆ, ಆತಂಕದ ಭಾವ, ಸಾಂಸ್ಕೃತಿಕ ಸಂವೇದನೆಗಳು ಮಡುಗಟ್ಟಿ ನಿಂತಿರುವುದನ್ನು ಕಾಣಬಹುದಾಗಿದೆ. ಸಮಾಜದಲ್ಲಿ ದುಷ್ಟಶಕ್ತಿಗಳು ತಮ್ಮ

ಕಪಿಮುಷ್ಠಿಯಲ್ಲಿ ರಾಜ್ಯದ ಆಡಳಿತ ಹಿಡಿದು ಜನತೆಯನ್ನು ದಾರಿತಪ್ಪಿಸುವ ರಾಜಕೀಯವನ್ನು ಎಲ್ಲ ಸ್ಥಾನಗಳಲ್ಲೂ ತಂದು ನಿಲ್ಲಿಸಿರುವುದನ್ನು

ಈಗ ರಸ್ತೆಗಳಲ್ಲಿ ಚಿತ್ಕಾರಗಳ
ತುಳಿಯುವುದು ಸಾಧ್ಯವಾಗದು
ಏಕೆಂದರೆ
ಎಲ್ಲ ಚೀತ್ಕಾರಗಳಿಗೆ ಆಶ್ರಯವಾದ
ವಿಶಾಲ ಕವಿತೆಯ ಪೂಜಾಸ್ಥಳವನ್ನೇ
ನಾನಿಂದು ಆರಿಸಿಕೊಂಡಿದ್ದೇನೆ. – (ಗಾಳಿಯದಿಕ್ಕು) ಎನ್ನುವಲ್ಲಿ

ವ್ಯಕ್ತವಾಗುತ್ತದೆ. ಅಂಬಲಗೆಯವರು ಹಿಂದಿಯಿಂದ ಪಂಜಾಬಿ ಭಾಷೆಯಿಂದ ಆರಿಸಿಕೊಂಡು ಅನುವಾದಿಸಿರುವ ಕವನಗಳು ಸೃಜನಶೀಲತೆಯಿಂದ ಕೂಡಿದ್ದು ಅವು ವಾಸ್ತವ ಬದುಕಿಗೆ ಹೆಚ್ಚು ಸಮೀಪವಾಗಿ ನಿಲ್ಲುತ್ತವೆ. ಅಲ್ಲೆಲ್ಲ ಸಾಂಸ್ಕೃತಿಕ ರಾಜಕಾರಣದ ಹುಡುಕಾಟವಿರುವುದನ್ನು ಕಾಣಬಹುದು.

ಎಷ್ಟೋ ದಿವಸಗಳವರೆಗೆ ಒಲೆ ಅಳುತ್ತಿತ್ತು
ಬೀಸುವ ಕಲ್ಲು ನಿರಾಸೆಗೊಂಡಿತ್ತು!

ಎಂಬಂತಹ ಅನುವಾದಿತ ಕವನಗಳಲ್ಲಿಯೂ ವ್ಯವಸ್ಥೆಯ ಅಮಾನವೀಯ ಮುಖಗಳ ಅನಾವರಣವಿರುವುದು ಸುಸ್ಪಷ್ಟ. ಹೈದ್ರಾಬಾದ ಕರ್ನಾಟಕದ ಉರ್ದುಮಯ ಮೊಗಲಾಯಿ ವಾತಾವರಣ ಅಂಬಲಗೆಯವರ ಅನುವಾದಿತ ಕವನಗಳಲ್ಲಿ ಸ್ಥಾನ ಪಡೆದಿದ್ದು ಆ ಮೂಲಕ ಇವರ ಗರಿಮೆ ಕಳೆಕಟ್ಟುತ್ತದೆ.

ಅನುವಾದಗಳ ಮೂಲಕ ಭಾಷೆಯಲ್ಲಿ ಸ್ಥಳೀಯ ಸಂವೇದನೆಯನ್ನು ತಂದು ಕೊಟ್ಟವರು ಅಂಬಲಗೆಯವರು ಮಾನವಂತ ಕರುಣೆಯ ಅನೇಕ ಮುಖಗಳನ್ನು ಅವರ ಕಾವ್ಯಾನುವಾದಗಳು ತೋರಿಸುತ್ತವೆ. ಈ ಮುಖಗಳನ್ನು ಅವರು ತುಂಬಾ ಪ್ರೀತಿಯ ಲಯದಲ್ಲಿ ಹಿಡಿದು ತೋರುವ ಸಾಮರ್ಥ್ಯವನ್ನು ಹೊಂದಿದ್ದಾರೆ.

ಕೊಲೆಗಾರ ಸ್ನಾನ ಮಾಡುತ್ತಿರುವಾಗ
ಸಾಬೂನು ಅವನ ಕಣ್ಣಲ್ಲಿ ಪ್ರವೇಶಿಸಿತು
ಕೊಲೆಗಾರ ಸಾಬೂನು ಎಸೆದು ಬಿಟ್ಟನು
ಸಾಬೂನು ಸಾಯುವ ವಸ್ತುವಾಗಿರಲಿಲ್ಲ
ಕೊಲೆಗಾರನ ರಕ್ತಸಿಕ್ತ ಕೈಗಳನ್ನು ಅದು ತೊಳೆಯಿತು
ಕೊಲೆಗಾರನಿಗೆ ಸಾಬೂನು ಚಂದ ಕಾಣತೊಡಗಿತು
ಸಾಬೂನು ತನ್ನ ಸ್ಥಾನ ಗಟ್ಟಿಗೊಳಿಸತೊಡಗಿತು

ಸಾಬೂನು – (ಓದಿ ಅಳುವುದು)

ಎಂಬಂತಹ ಕವಿತೆಗಳಲ್ಲಿ ಅವರು ಒಂದು ಕಠೋರ ಮುಖವನ್ನು ಪ್ರೀತಿಯ ಲಯದಲ್ಲಿ ಹಿಡಿದಿಟ್ಟಿರುವುದನ್ನು ಕಾಣಬಹುದಾಗಿದೆ. ಈ ಪ್ರೀತಿಯ ಕಾರಣಾವಾಗಿಯೇ ಅವರು 'ಬೀದರ ಭಾಷೆಯ' ಆಡುಮಾತಿನ ಜಾಡನ್ನು ಹಿಂಬಾಲಿಸಿಕೊಂಡು ಹೋಗಿರುವುದು ಅವರ ಕಾವ್ಯಗಳಲ್ಲಿ ಕಾಣಸಿಗುತ್ತದೆ. ಬೀದರ ಭಾಷೆಯ ವಿಶಿಷ್ಟ ಲಯವನ್ನು ಅವರು ಇದೇ ಪ್ರೀತಿಯಿಂದ ಕಾದಿಟ್ಟುಕೊಂಡು ಬರುತ್ತಿದ್ದಾರೆ. ತನ್ನ ನೆಲ ಮತ್ತು ಭಾಷೆ ಹಾಗೂ ಮಂದಿಯನ್ನು ಅದಮ್ಯವಾಗಿ ಪ್ರೀತಿಸುವ ಅಂಬಲಗೆಯವರು ಅವೆಲ್ಲವನ್ನು ಕಾವ್ಯದ ಧಾತುವಾಗಿ ಸ್ವೀಕರಿಸಿದ್ದನ್ನು ಗುರುತಿಸಬಹುದು. ಇವು ಅವರ ಅನುವಾದ ಕಾವ್ಯಗಳಲ್ಲಿ ಅಷ್ಟೇ ಅಲ್ಲ! ಅದೇ ಅವರ ಸಾಹಿತ್ಯ ಜೀವನದ ಸಾರ್ಥಕಕ್ಕೆ ಮೆಟ್ಟಿಲುಗಳಾಗಿ ನಿಲ್ಲುತ್ತಿವೆ. ಆದ್ದರಿಂದಲೇ ಅವರು ಬಂಡಾಯದ ಕಾವ್ಯವನ್ನು ಕೆಚ್ಚಿನಿಂದ ಆರಂಭಿಸಿಕೊಂಡಿದ್ದಾರೆ. ಬರವಣಿಗೆಯನ್ನು ನಿರಂತರ ಹುಡುಕಾಟವಾಗಿಸುವ ಮೂಲಕ ಜೀವನಕ್ಕೂ ಕಾವ್ಯಕ್ಕೂ ವಾಸ್ತವತೆಯನ್ನು ತಂದು ಕೊಟ್ಟಿದ್ದಾರೆ.

ಅವರು ಕಾವ್ಯಾನುವಾದಗಳ ಮೂಲಕ ಕನ್ನಡ ಸಾಹಿತ್ಯದಲ್ಲಿ ತುಂಬಾ ಪ್ರಧಾನವಾದ ಸ್ಥಾನವನ್ನು ಗಳಿಸಿರುವುದನ್ನು ಅವರ ಕಾವ್ಯದ ಅನೇಕ ಓದುಗರಿಂದಲೂ ನಾವು ಅರಿಯಬಹುದಾಗಿದೆ. ಕನ್ನಡದ ಶ್ರೇಷ್ಠ ಕಥೆಗಾರ ಹಾಗೂ ಚಿಂತನಶೀಲ ಬರಹಗಾರರಾದ 'ಬೋಳವಾರ' ಅವರು, 'ಕೋಗಿಲೆ ಅಳುತಿದೆ' ಎಂಬ ಅನುವಾದ ಕೃತಿ ಕುರಿತು ಪ್ರತಿಕ್ರಿಯಸುತ್ತ ಬರೆದ ಪತ್ರಗಳು ಹೀಗಿವೆ.

[illegible]
18.11.[illegible]

[illegible],

[illegible]
[illegible]
[illegible]
[illegible] 200 [illegible]
[illegible]
[illegible]
[illegible]
120 ನೇ [illegible]
[illegible]
[illegible] 46 [illegible]

[illegible]
[illegible]
[illegible] 146
[illegible]

[illegible]

"ಕೋಗಿಲೆ ಅಳುತಿದೆ"

ಕವಿತೆ 120

**ಘೋಷಣೆ**
ಅಭಿಮಾನದಿಂದ
ಹೇಳಿರಿ....
ನಾವು ಮನುಷ್ಯರು
ಎನ್ನಿರಿ.......

ಕವಿತೆ 46

**ಹರಿದು ಹೋಗಿದ್ದೆ**
ಏನಾಗಿತ್ತು?
ಏನೂ ಆಗಿರಲಿಲ್ಲ
ನಾನೇ ಒಂದಿಷ್ಟು
ಹರಿದು ಹಂಚಿ ಹೋಗಿದ್ದೆನಲ್ಲ!

ಕವಿತೆ 146 ಭಯ

**ಇಬ್ಬರು ಗೆಳೆಯರು**
ಒಂದು ಕೋಣೆಯಲ್ಲಿ
ಬಹಳ ಹೊತ್ತಿನಿಂದ
ಮೌನವಾಗಿ ಕುಳಿತಿದ್ದಾರೆ!

ಮೇಲಿನ ಈ ಎರಡು ಪತ್ರಗಳು ಓದುಗನಲ್ಲಿ ಎಂತಹ ತಳಮಳ ಹಾಗೂ ಸಾಮಾಜಿಕ ಜವಾಬ್ದಾರಿತನವನ್ನು ಕೆಣಕುತ್ತವೆ ಎಂಬುದನ್ನು ಇಲ್ಲಿ ಕಾಣಬಹುದು. ಒಬ್ಬ ಕವಿ ಅನುವಾದಕನ ಸ್ಥಾನ-ಮಾನ ಗುರುತಿಸುವಲ್ಲಿ ಇವು ಹೇಗೆ ಕೆಲಸ ಮಾಡುತ್ತವೆ ಎಂಬುದನ್ನಿಲ್ಲಿ ಕಾಣಬಹುದು. ಪಂಜಾಬಿನ ಆತಂಕವಾದದ ಹಿನ್ನೆಲೆಯ ಸಾವು ನೋವಿನ ೨೦೦ ಮಿನಿ ಕವಿತೆಗಳು ಸಾಮಾಜಿಕ ಕಳವಳಕ್ಕಾಗಿ ಅಳುವ ಕವಿತೆಗಳಾಗಿವೆ. ಇಂತಹ ಕವಿತೆಗಳು ಕನ್ನಡದ ಹೆಚ್ಚಿನ ಓದುಗರಿಗೆ ತಲುಪಿರಲಿಲ್ಲ. ಅದು ತಲುಪಬೇಕೆಂಬ ಆಶೆಯಿಂದ ಡಾ. ಅಂಬಲಗೆಯವರು ಅನುವಾದ ಕಾರ್ಯಕ್ಕೆ ಕೈ ಹಾಕಿದರು. ಅವರ 'ಕೋಗಿಲೆ ಅಳುತಿದೆ' ಸಮಕಾಲೀನ ಪಂಜಾಬಿ ಕವಿತೆಗಳು ಹಾಗೂ ಓದಿ ಅಳುವುದು ಎಂಬ ಕಾವ್ಯಾನುವಾದಗಳು ಕವಿಯೊಬ್ಬನಿಗೆ ತನ್ನ ಸಮಕಾಲೀನ ಸಮಾಜದ ಕಾಳಜಿ ಎಂತಹ ಕಾವ್ಯ ಕೊಡುತ್ತವೆ ಎಂಬುದನ್ನು ತಿಳಿಸುತ್ತವೆ. ಈ ನೆಲೆಯಲ್ಲಿ ಆ ಕವಿಯ ಸಾಮಾಜಿಕ ಸ್ಥಾನಮಾನಗಳನ್ನು ನಿರ್ಧರಿಸುತ್ತದೆ ಎನ್ನಬಹುದು.

ತಮ್ಮ ಜೀವನದ ಸಾರ್ಥಕ ಅರವತ್ತು ವಸಂತಗಳನ್ನು ದಾಟಿ ನಿಂತಿರುವ ಡಾ. ಕಾಶಿನಾಥ ಅಂಬಲಗೆಯವರ ಜೀವನೋತ್ಸಹ ಮೆಚ್ಚುವಂತಹದ್ದಾಗಿದೆ. ಅವರ ಬರವಣಿಗೆ ಹಾಗೂ ದೈನಂದಿನ ಕಾರ್ಯಗಳನ್ನು ಗಮನಿಸುವವರಿಗೆ ಅಂಬಲಗೆಯವರು ಇದೇ ಈಗ ತಾನೆ ಹರೆಯಕ್ಕೆ ಕಾಲಿಟ್ಟಿರುವ ತರುಣ ಮಿತ್ರನಾಗಿ ಕಾಣಿಸುತ್ತಾರೆ. ಅವರಿಗೆ ಬೇಸರವೆಂಬುದಕ್ಕೆ ಕಾವ್ಯ ಅವಕಾಶವನ್ನೇ ಕೊಟ್ಟಿಲ್ಲ ಎನ್ನಬಹುದು. ಯಾವಾಗಲೂ ಸಾಹಿತ್ಯ ಕೈಂಕರ್ಯ, ರಂಗಭೂಮಿ ಕಾರ್ಯ, ಚಳುವಳಿ, ಓಡಾಟ ಅಕಾಡೆಮಿಕ ಕಾರ್ಯಭಾರ ಹೀಗೆ ಹಲವು ಹತ್ತು ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಸದಾ ಪುಟಿಯುತ್ತಲೆ ಓಡಾಡುವ ಇವರಿಗೆ ಸಮಯವೇ ಸಾಕೆನಿಸುವುದಿಲ್ಲ. ಎಷ್ಟೆಲ್ಲ ಪ್ರಶಸ್ತಿಗಳು ಬಂದಿದ್ದರೂ, ಏನೆಲ್ಲ ಸಾಧನೆಗಳನ್ನು ಅವರು ಮಾಡಿದ್ದರೂ ಬಿಂಕು ಬಿಗುಮಾನವಿಲ್ಲದ ಅವರು ಎಲ್ಲರೊಂದಿಗೆ ಸಾಮಾಜಿಕವಾಗಿ ಬೆರೆಯಬಲ್ಲರು. ಹಾಗೆಯೇ ಸಾಹಿತ್ಯ ಕ್ಷೇತ್ರದಲ್ಲಿಯೂ ಹಲವು ಸಂಘ ಸಂಸ್ಥೆಗಳ ಸದಸ್ಯರಾಗಿದ್ದುಕೊಂಡು ತಮ್ಮ ವಯಸ್ಸೆಂಬ ಗೆರೆಯನ್ನು ಅಳಿಸಿ ಬೆಳೆಯತೊಡಗಿರುವರು. ಅವರ ಲೇಖನಿಯ ಸುಗ್ಗಿಯ ಕಾಲ ಇನ್ನೂ ಇದೆ ಎನ್ನಬಹುದು.

ಅವರ ವೈವಿಧ್ಯಮಯವಾದ ಸಾಹಿತ್ಯ ಸೃಷ್ಟಿ ಹಾಗೂ ಕಾವ್ಯಾನುವಾದ ಕನ್ನಡದಲ್ಲಿ ತನ್ನದೆ ಆದ ವೈಶಿಷ್ಟ್ಯವನ್ನು ಕಾಪಾಡಿಕೊಂಡಿದೆ. ಮೈ ಮನಸ್ಸು, ವಿಚಾರಗಳನ್ನು ಸದಾ ಫ್ರೆಶ್ ಆಗಿ ಇಟ್ಟುಕೊಂಡಿರುವ ಡಾ. ಅಂಬಲಗಿಯವರು ಹೈದ್ರಾಬಾದ ಕರ್ನಾಟಕ ಭಾಗದ ಚೇತನದ ಚಿಲುಮೆಯಾಗಿದ್ದಾರೆ. ವರ್ತಮಾನದ ಈ ಸಂದಿಗ್ದತೆ, ಖಾಲಿತನಗಳ ನಡುವೆಯೂ ಅವರ ಕಣ್ಣಲ್ಲಿರುವ ಕನಸುಗಳನ್ನು ಹಾಗೂ ಅವರ ಕಾವ್ಯಗಳಲ್ಲಿರುವ ವಿಚಾರಗಳನ್ನು ಯಾರೂ ಕಂಡು ಕೊಳ್ಳಬಹುದಾಗಿದೆ.

ಕೋಮುವಾದ ಜಾತಿಯತೆ ಭಯೋತ್ಪಾದನೆಗಳನ್ನು ಹೊಡೆದೋಡಿಸಬೇಕೆಂಬ ಕಾಳಜಿಯೊಂದಿಗೆ ಬಡಿದಾಡುತ್ತಿರುವ ಹಲವರ ಗುಂಪಿನಲ್ಲಿ ಹಿರಿಯರಾಗಿರುವ ಅಂಬಲಗೆಯವರು ಒಬ್ಬ ಪ್ರೀತಿಯ ಕವಿಯಾಗಿದ್ದು ಚಿಕ್ಕವರಿಂದಲೂ ಅಭಿಪ್ರಾಯಗಳನ್ನು ಬರೆಸಿಕೊಂಡು ಬೆಳೆದಿದ್ದಾರೆ. ಸರಳತೆ, ಸಹಜತೆಯ ವ್ಯಕ್ತಿತ್ವ ಹಾಗೂ ಕವಿತ್ವಗಳಿಂದ ಗಮನ ಸೆಳೆಯುತ್ತಿರುವ ಡಾ. ಕಾಶೀನಾಥ ಅಂಬಲಗೆಯರದು ವಿಶಿಷ್ಟ ವ್ಯಕ್ತಿತ್ವ. ಅವರ ವೈಯಕ್ತಿಕತೆಯ ಹೊಸ್ತಿಲನ್ನು ದಾಟಿ ನಿಲ್ಲುವ ಈ ಗುಣಗಳು ಸಾರ್ವತ್ರಿಕ ಬಯಲಲ್ಲಿ ನಲಿಯುತ್ತಿರುವುದನ್ನು ಗುರುತಿಸಿರುವವರಿಗೆ ಅವರ ವ್ಯಕ್ತಿತ್ವದ ರೀತಿ ಅರ್ಥವಾಗುತ್ತದೆ. ಅಂತಹ ಅನೇಕ ಆಶಯ, ಅಭಿವ್ಯಕ್ತಿ ಹಾಗೂ ಚಿಂತನೆಗಳನ್ನು ಅವರ ಕಾವ್ಯದಲ್ಲಿ ಗುರುತಿಸಬಹುದಾಗಿದ್ದು ಅಧ್ಯಯನದುದ್ದಕ್ಕೂ ಅವು ವ್ಯಕ್ತವಾಗಿ ನಿಂತಿವೆ.

ಈ ರೀತಿಯ ಎಲ್ಲ ವಿಶೇಷತೆಗಳಿಂದ ಎದ್ದು ಕಾಣುವ ಡಾ. ಕಾಶೀನಾಥ ಅಂಬಲಗೆಯವರು ಒಬ್ಬ ಕವಿಯಾಗಿ, ವಿಮರ್ಶಕರಾಗಿ, ಸಂಶೋಧಕರಾಗಿ, ಮಾರ್ಗದರ್ಶಕರಾಗಿ, ಪ್ರಗತಿಶೀಲ ಚಿಂತನೆಗಳುಳ್ಳ ಬರಹಗಾರರಾಗಿರುವಂತೆ ಅನುವಾದಗಳ ಮೂಲಕ ಹೊಸ ಸಂವೇದನೆಗಳನ್ನು ಬೀದರನ ವಿಶಿಷ್ಟ ಭಾಷೆಯ ಮೂಲಕ ಸ್ಥಳೀಯ ಸಂವೇದನೆಗಳನ್ನು ಸಾಮಾಜಿಕ ಕಾಳಜಿಯುಳ್ಳ ಚಳುವಳಿಗಳಲ್ಲಿ ಸಕ್ರಿಯವಾಗಿ ಪಾಲುಗೊಳ್ಳುವ ಮೂಲಕ ವರ್ತಮಾನದ ನಿರೀಕ್ಷೆಗಳನ್ನು ಕಟ್ಟಿಕೊಡುವ ಮಹಾಮಣಿಹದಲ್ಲಿ ನಿರತರಾಗಿದ್ದು ಗಮನಾರ್ಹವೆನಿಸುತ್ತಾರೆ.

ಒಟ್ಟಿನಲ್ಲಿ ಕಾವ್ಯ ಪ್ರಕಾರದ ಮೇಲೆ ಒಳ್ಳೆಯ ಹಿಡಿತವಿರುವ ಡಾ. ಅಂಬಲಗಿಯವರು ಸಾಮಾಜಿಕ ನಿಲವುಳ್ಳ ಒಳ್ಳೆಯ ಕವನಗಳನ್ನು ನೀಡುತ್ತ ಮುಂದೆ ಮುಂದೆ ಸಾಗಿರುವುದನ್ನು ಗುರುತಿಸುವಂತೆ ಅವರ ಅನುವಾದ ಸಾಹಿತ್ಯದಲ್ಲಿಯೂ ಈ ವಿಶಿಷ್ಟ ಲಕ್ಷಣವಿರುವುದನ್ನು ಅಲ್ಲಗಳೆಯಲಾಗದು. ಅವರು ಚಿಕ್ಕ ಕವನಗಳ ಅನುವಾದದ ಮೂಲಕ ಚೊಕ್ಕತನವನ್ನು ತಂದಿರುವುದು ಭಾವ–ಭಾಷೆಗಳ ಅನುರೂಪ ಹೊಂದಾಣಿಕೆಯಿಂದಲೇ ಎನ್ನಬಹುದಾದರೂ ಅವರ ಸ್ಥಾನ ಮಾನದ ಬೆಲೆಯನ್ನು ಗುರುತಿಸಲು ಇಲ್ಲಿರುವ ಅವರ ಜನಪರ ನಿಲುವು ಅತ್ಯಂತ ಪ್ರಮುಖವಾದುದು ಎನ್ನಬಹುದು.

ಈ ಹಲವು ದೃಷ್ಟಿಯಲ್ಲಿ ಅಧ್ಯಯನ ಮಾಡಿದಾಗ ಡಾ. ಕಾಶೀನಾಥ ಅಂಬಲಗಿಯವರು ಈ ಭಾಗದ ಒಬ್ಬ ಪ್ರಜ್ಞಾವಂತ ಬಂಡಾಯ ಕವಿಯಾಗಿ, ಪ್ರಗತಿಪರ ಚಿಂತನೆಯುಳ್ಳ ಬರಹಗಾರರಾಗಿ ಎದ್ದು ಕಾಣುತ್ತಾರೆ. ಹೈದ್ರಾಬಾದ ಕರ್ನಾಟಕದ ಹಲವು ಸಾಹಿತಿಗಳಲ್ಲಿ ಪ್ರಮುಖರೆನಿಸುವ ಇವರು ಕಾವ್ಯಾನುವಾದಗಳ ಮೂಲಕ ಸಮಕಾಲೀನ ಕವಿತೆಗಳೊಂದಿಗೆ ಹೋಲಿಸಿ ನೋಡಿದಾಗಲೂ ಶ್ರೇಷ್ಠ ಅನುವಾದಕರಾಗಿ ಕಣ್ಮನ ಸೆಳೆಯುತ್ತಾರೆ. ಈ ಹಿನ್ನಲೆಯಲ್ಲಿ ಅವರನ್ನು ನಾವು ಈ ಭಾಗದ ಒಬ್ಬ ಸೃಜನಶೀಲ ಅನುವಾದಕನೆಂದು ಗುರುತಿಸಬಹುದಾಗಿದೆ.

# ಸಮಾರೋಪ

ಡಾ. ಕಾಶಿನಾಥ ಅಂಬಲಗಿಯವರು ೧೯೭೭ರ ದಶಕದಿಂದಲೇ ಕಾವ್ಯಾಸಕ್ತಿಯನ್ನು ಬೆಳೆಸಿಕೊಳ್ಳುತ್ತ ಕಾವ್ಯ ರಚನೆಗೆ ತೊಡಗಿದ್ದಾರೆ. ಅವರ ಸೃಜನಶೀಲತೆಯು ಗದ್ಯ-ಪದ್ಯ ಹಾಗೂ ಅನುವಾದಗಳಲ್ಲಿ ಅಭಿವ್ಯಕ್ತಗೊಂಡಿದೆ. ಈಗಾಗಲೇ ಅವರು ಮೂವತ್ತೈದು ಸಾಹಿತ್ಯ ಕೃತಿಗಳನ್ನು ಪ್ರಕಟಿಸಿರುತ್ತಾರೆ.

ಒಬ್ಬ ವ್ಯಕ್ತಿ ಅವನ ಅನುಭವ ಹಾಗೂ ವೈಯಕ್ತಿಕ ಶಕ್ತಿ ದೊಡ್ಡದಿರಲಿ ಸಣ್ಣದಿರಲಿ ತನ್ನ ಸ್ವಂತ ಮನೆಯ ಮಂದಿಯನ್ನು ಕುರಿತು ಬರೆಯಬೇಕು. ತಾನು ಸ್ವತಃ ಬದುಕಿದ್ದನ್ನು ಕುರಿತು, ಕಂಡದ್ದನ್ನು, ಯೋಚಿಸಿದನ್ನು, ಅನುಬವಿಸಿದ್ದನ್ನು, ಪ್ರಾಮಾಣಿಕವಾಗಿ ವರದಿ ಮಾಡಬೇಕು. ಸಾಹಿತಿಯು ಯಾವಾಗಲೂ ನೈಜತೆಯತ್ತ ಇರಬೇಕು. ಈ ಸಾರ ಗುಣವೇ ಸಾಹಿತ್ಯದ ಮೌಲ್ಯ[೧] ಎಂಬ ಮಾತಿನಂತೆ ಅಂಬಲಗೆಯವರು ನಡೆದವರಾಗಿದ್ದಾರೆ. ಅವರು ಒಬ್ಬ ಶಿಕ್ಷಕರಾಗಿ, ಉಪನ್ಯಾಸಕರಾಗಿ, ಪ್ರವಾಚಕರಾಗಿ, ವಿಶ್ವವಿದ್ಯಾಲಯದ ಪ್ರಾಧ್ಯಾಪಕ ನಿರ್ದೇಶಕರಾಗಿ, ಕವಿಯಾಗಿ, ಸಂಶೋಧಕರಾಗಿ, ಎಲ್ಲಕ್ಕಿಂತ ಹೆಚ್ಚಾಗಿ ಒಬ್ಬ ಶ್ರೇಷ್ಠ ಅನುವಾದಕರಾಗಿ ಈ ಎಲ್ಲ ಕ್ಷೇತ್ರಗಳಲ್ಲಿ ಸಾಹಿತ್ಯಾಕಾಂಕ್ಷಿಗಳಾಗಿ ಅನುಭವಿಸಿದ ಅನುಭವ ಎದುರಿಸಿದ ಬಿಕ್ಕಟ್ಟುಗಳನ್ನು ಕಂಡುಂಡ ಬದುಕನ್ನು ಎಲ್ಲವನ್ನೂ ಕಾವ್ಯವಾಗಿಸಿದ್ದಾರೆ.

ಸಾಂಪ್ರದಾಯಿಕ ಮನೆತನದಲ್ಲಿ ಜನಿಸಿದರೂ ಸಹ ಆಧುನಿಕತೆಯತ್ತ ತುಡಿಯುವ ಮನೋಧರ್ಮವನ್ನು ಬೆಳೆಸಿಕೊಂಡಿರುವರು. ಅವರ ಪ್ರಾರಂಭದ ಕವನಗಳಿಗೂ ನಂತರದ ಕವನಗಳಲ್ಲಿಯ ಧೋರಣೆಗಳಲ್ಲಿ ವಿಶೇಷವಾದ ವ್ಯತ್ಯಾಸಗಳೇನು ಕಾಣಸಿಗುವುದಿಲ್ಲ. ಹಾಗೆಯೇ ಅವರ ಕಾವ್ಯಾನುವಾದಗಳು ಈ ಧೋರಣೆಯಿಂದ ಮುಕ್ತವಾಗಿಲ್ಲವೆನ್ನಬಹುದು. ಅವರ ಕಾವ್ಯಾನುವಾದಗಳ ಸಮಗ್ರತೆಯ ದೃಷ್ಟಿಯನ್ನು ಹೊಂದಿರುವುದನ್ನು ಗುರುತಿಸಬಹುದು. ``ಕನ್ನಡ ಕಾವ್ಯ ಪರಂಪರೆಯ ಸಾರವನ್ನು ಹೀರಿಕೊಂಡು, ಅದರ ಇಂದಿನ ದಾಟಿ ಧೋರಣೆಗಳನ್ನು ಅನುಸರಿಸಿಯೂ, ಅನುಕರಣವಾಗದಂತೆ ಬದುಕಿಗೆ ಹತ್ತಿರವಾದ ಅನುಭವವನ್ನು ಪ್ರಾಮಾಣಿಕ ಪರಿಶ್ರಮದಿಂದ ನಿರೂಪಿಸುವ ಪ್ರಯತ್ನ''[೨] ವನ್ನು ಇಲ್ಲಿ ಅಂಬಲಗೆಯವರೂ ಮಾಡಿದನ್ನು ಕಾಣಬಹುದು.

ಕನ್ನಡ ಸಾಹಿತ್ಯದಲ್ಲಿ ಕಾವ್ಯವು ಇಂದೂ ಅತ್ಯಂತ ಜನಪ್ರಿಯವಾಗಿ ಬೆಳೆದು ನಿಂತಿರುವ ಸಾಹಿತ್ಯರೂಪ. ಈ ಸಾಹಿತ್ಯರೂಪದಲ್ಲಿ ಜನಸಾಮಾನ್ಯರ ಅಭಿರುಚಿಗಳನ್ನು, ಆಶೋತ್ತರಗಳನ್ನು, ಭಿನ್ನ ಸಂಸ್ಕೃತಿಯ ಸ್ವರೂಪವನ್ನು ಅತ್ಯಂತ ಪರಿಣಾಮಕಾರಿಯಾಗಿ ವಿವರಿಸಬಹುದಾಗಿದ್ದು, ಈ ಕಾವ್ಯಮಾಧ್ಯಮವು ಡಾ. ಅಂಬಲಗೆಯವರಿಗೆ ಸಿದ್ಧಿಸಿದೆ

---

೧. ವಿಲಿಯಂ ಹೆಡ್ರಿ ಹಡಸ್ – ಸಾಹಿತ್ಯ ಪ್ರವೇಶ – ಪುಟ ಸಂ. ೧೨ – ೧೯೭೪

೨. ಚನ್ನವೀರ ಕಣವಿ – 'ಒಂದುಗಳಿಗೆ' ಸಂಕಲನದ ಮುನ್ನುಡಿಯಲ್ಲಿ – ೧೯೭೨

ಎನ್ನಬಹುದು. ಕಾವ್ಯವು ಸಮಕಾಲೀನ ಜೀವನದ ಪ್ರಚಲಿತ ವಿದ್ಯಮಾನಗಳನ್ನು ಕುರಿತು ಅರಿವು ಮೂಡಿಸುವ ಪ್ರಬಲ ಸಾಹಿತ್ಯ ರೂಪವೆನಿಸಿದ್ದು ಅದು ಅಂದಂದಿನ ಬದುಕಿನ ಮುನ್ನೋಟದ ಬಗೆಯನ್ನು ತಿಳಿಸುತ್ತದೆ. ಈ ಅರಿವಿನಿಂದ ನಮ್ಮ ಜೀವನ ಹಸನಮಾಡಿಕೊಳ್ಳಲು ಸಹಾಯ ದೊರೆಯುತ್ತದೆ. ಇದು ಬದುಕಿಗೆ ಅತಿ ಸಮೀಪವಾದ ಒಂದು ಸಾಹಿತ್ಯ ಮಾಧ್ಯಮವಾಗಿ ಇಂದಿಗೂ ನಮ್ಮೊಂದಿಗೆ ಬೆಳೆಯುತ್ತ ನಡೆದಿರುವುದರಿಂದ ಅಂಬಲಗೆಯವರು ಈ ಮಾಧ್ಯಮದಲ್ಲಿ ತಮ್ಮ ಸಾಹಿತ್ಯ ಕೃಷಿಯನ್ನು ಮುಂದುವರೆಸಿದ್ದಾರೆ ಅಷ್ಟೇ ಅಲ್ಲ ಅವರ 'ಅನುವಾದ ಸಾಹಿತ್ಯ'ವು ಸಹ ಕಾವ್ಯ ಮಾಧ್ಯ್ಮದಲ್ಲಿಯೇ ಯಶಸ್ವಿಯಾಗಿ ನಡೆಯುತ್ತಿರುವುದು ಕನ್ನಡ ಕಾವ್ಯಕ್ಕೆ ಸಲ್ಲುವ ಕಾಣಿಕೆ ಎನ್ನಬಹುದು.

ಇಂದಿನ ಬದುಕೇ ಒಂದರ್ಥದಲ್ಲಿ ಕವತೆಯಾಗಿ ಮನುಷ್ಯನ ಸುತ್ತ ಬದುಕನ್ನು ಆವರಿಸಿದ್ದು, ಅದು ಎಲ್ಲ ರಂಗದಲ್ಲಿಯೂ ಕಾಣಸಿಗುತ್ತದೆ. ಪ್ರಗತಿಪರ ಆಲೋಚನೆಗಳು, ಜೀವನ್ಮುಖಿ ಸಂಘರ್ಷಗಳು, ಬದಲಾವಣೆಯ ಕನಸುಗಳನ್ನು ಕಂಡುಕೊಂಡಿರುವ ಇಂದಿನ ಕವಿಗಳಿಗೆ ಕವಿತೆ ಮತ್ತು ಬದುಕು ಹೇಗೆ ಭಿನ್ನವೆನಿಸುವುದಿಲ್ಲವೋ ಹಾಗೆ ಡಾ. ಕಾಶೀನಾಥ ಅಂಬಲಗಿಯವರ ಬದುಕು ಕೂಡಾ ಇರುವುದನ್ನು ನಾವಿಲ್ಲಿ ಗಮನಿಸಬಹುದು. ಬದುಕಿನ ತುಂಬಾ ಹರಡಿದ ಅನೇಕ ನೋವಿನ ಘಟನೆಗಳೆಲ್ಲವೂ ಅಂಬಲಿಗೆಯವರ ಕವಿತೆಗಳಾಗಿ ರೂಪಿತವಾಗಿದೆ. ಅದರಲ್ಲೂ ೮೦ರ ದಶಕಕದಲ್ಲಿ ಪಂಜಾಬಿನಲ್ಲಿ ನಡೆದ ಆತಂಕವಾದದ ನೋವು, ಸಂಕಷ್ಟಗಳು ಅಲ್ಲಿನ ಪ್ರಗತಿವಾದಿ ಕವಿಗಳನ್ನು ಕಾಡಿದಂತೆ ಅವು ವಿಚಾರವಾದಿ ಕವಿಗಳಲ್ಲಿ ಪ್ರಮುಖರಾಗಿರುವ ಅಂಬಲಗೆಯವರ ಮನಸೆಳೆದಿವೆ. ಬದುಕಿನಲ್ಲಿ ಜರುಗುವ ಸಾವು, ನೋವು ಅಂಬಲಗೆಯವರ ಅನುವಾದ ಕಾವ್ಯಗಳ ಸ್ಥಾಯಿಯಾಗಿದೆ. ಅಂತೆಯೇ ಅವರ ಎರಡು ಕಾವ್ಯಾನುವಾದಗಳ ಹೆಸರು – 'ಕೋಗಿಲೆ ಅಳುತಿದೆ' ಹಾಗೂ ಓದಿ ಅಳುವುದು' ಎಂದಿಟ್ಟು ಕೊಂಡಿರುವರು. ಇಲ್ಲಿಯ ಬಹುತೇಕ ಕವನಗಳು ತಮ್ಮ ಹೃದಯಾಂತರಾಳದಲ್ಲಿ ನೋವನ್ನು ತುಂಬಿಕೊಂಡು ಅರಳಿನಿಂತಿರುವುದನ್ನು ಗುರುತಿಸಬಹುದು. ವ್ಯಂಗ್ಯಾಭಿವ್ಯಕ್ತಿಯ ಮೂಲಕ ಆಯಾ ನೋವಿನ ಘಟನೆಗಳನ್ನು ನಿರೂಪಿಸುವ ಡಾ. ಕಾಶಿನಾಥ ಅಂಬಲಗೆಯವರ ಅನುವಾದ ಶೈಲಿ ತುಂಬಾ ಮನೋಹರವಾದುದು ಎಂಬುದನ್ನು ಅನೇಕ ಕವನಗಳಲ್ಲಿ ಕಾಣಬಹುದಾಗಿದೆ. ಆ ಮೂಲಕ ಇಲ್ಲಿ ಕವಿಯಾಗಿರುವ ಅಂಬಲಗೆಯವರ ಅನುವಾದಗಳು ಆಯಾ ಕಾಲದ ಸಂದರ್ಭದ ಸಾಕ್ಷಿ ಪ್ರಜ್ಞೆಯಾಗಿ ಮೂಡಿನಿಲ್ಲುತ್ತಿವೆ ಅದರಲ್ಲೂಅವರ ಮಿನಿಗವಿತೆಗಳು ಇಲ್ಲಿ ನಕ್ಷತ್ರಗಳಂತೆ ಕಾವ್ಯಲೋಕದಲ್ಲಿ ಹೊಳೆಯುತ್ತಿವೆ. 'ಸಮಕಾಲೀನ ಪಂಜಾಬಿ ಕವಿತೆಗಳು' ಈ ಮಾತಿಗೆ ಸಾಕ್ಷಯನ್ನು ಒದಗಿಸುತ್ತವೆ.

ಡಾ. ಕಾಶೀನಾಥ ಅಂಬಲಗೆಯವರ ಕಾವ್ಯಾನುವಾದಗಳು ಕನ್ನಡ ಸಾಹಿತ್ಯದಲ್ಲಿ ತಮ್ಮದೇಯಾದ ಮಹತ್ವವನ್ನು ಪಡೆದುಕೊಂಡು ನಿಂತಿರುವುದನ್ನು ಇಲ್ಲಿ ಗುರುತಿಸಬಹುದು.

ಅವರ ಕಾವ್ಯಾನುವಾದದಲ್ಲಿಯ ವಸ್ತುವಿನ ಆಯ್ಕೆ, ಭಾಷಾ ಬಳಕೆ, ತಂತ್ರಗಳ ಹೆಣಿಕೆ, ಘಟನಾ ನಿರೂಪಣೆಗಳು ಬೀದರನ ಆಡು ಭಾಷಾ ಶೈಲಿಯ ಭಿನ್ನತೆಯಲ್ಲಿದ್ದು, ಓದುಗರ ಗಮನ ಸೆಳೆಯುತ್ತವೆ. ಸಾಮಾನ್ಯನ ಆಡುಭಾಷಾ ಬಳಕೆಯ ಪದಗಳನ್ನು ಬಳಸುವುದರೊಂದಿಗೆ ಅವರ ಕಾವ್ಯರಚನೆಯಲ್ಲಿ ಗಮನಸೆಳೆಯುವಂತೆ ಅನುವಾದದಲ್ಲಿಯೂ ಆ ಲಕ್ಷಣವನ್ನು ಉಳಿಸಿಕೊಂಡಿರುವುದು ಸ್ಪಷ್ಟವಾಗಿ ಕಾಣುತ್ತದೆ. ಜನಪರ ಆದರ್ಶಗಳನ್ನು ಕಾವ್ಯಾನುವಾದಗಳ ಮೂಲಕ ತಂದು ತೋರುವ ಅಂಬಲಗೆಯವರದು ಪ್ರತಿಭಟನಾ ರೂಪದ ಬರವಣಿಗೆಯಾಗಿದ್ದು, ಅದರಲ್ಲಿ ವಿಡಂಬನೆಯ ಮೊನಚು ಎದ್ದು ಕಾಣುತ್ತದೆ.

ಸಾಮಾಜಿಕ ಕಳಕಳಿಯುಳ್ಳ ಅಂಬಲಗೆಯವರ ಬರವಣಿಗೆ ಸದಾ ಸಮಾಜ ಶೋಷಿತರ ಪರವಾಗಿದೆ. ಹೀಗಾಗಿ ಅವರ ಕಾವ್ಯಾನುವಾದಗಳು ಸಾಮಾಜಿಕ ಪ್ರಜ್ಞೆ, ಸ್ವಂತನೆಲದ ಹಂಬಲ, ರಾಜಕೀಯ ರಂಗಿನಾಟ, ಧಾರ್ಮಿಕ ಶೋಷಣೆ ಮುಂತಾದ ಕ್ಷೇತ್ರಗಳನ್ನು ಪ್ರಧಾನವಾಗಿಟ್ಟುಕೊಂಡು ರಚನೆಯಾದಂತಿವೆ. ದಬ್ಬಾಳಿಕೆ, ಬಡತನ, ಅಜ್ಞಾನ, ದೇವರು–ಧರ್ಮದ ಹೆಸರಿನಲ್ಲಿ ನಡೆಯುವ ಮೋಸ–ವಂಚನೆ, ಅನ್ಯಾಯ ಅನಾಚಾರಗಳಿಗೆ ರೋಷಹೋಗಿ, ಅವುಗಳನ್ನು ಖಂಡಿಸುವ ಹರಿತವಾದ ಭಾಷೆಯನ್ನು ಉಪಯೋಗಿಸಿಕೊಂಡು ಅವುಗಳನ್ನು ಕವನಗಳಲ್ಲಿ ಪ್ರತಿಬಿಂಬಿಸಿದ್ದಾರೆ. ಜನಮುಖಿ ಭಾವನೆಗಳೇ ಅವರ ಮೂರು ಕಾವ್ಯಾನುವಾದಗಳಲ್ಲಿ ತುಂಬಿ ಬಂದಿರುವುದನ್ನು ಅರಿಯಬಹುದು.

ಪಂಜಾಬಿನ ಅಂದಿನ ಸ್ಥಿತಿಗತಿ, ನೋವು–ಅಲ್ಲಿಯ ಅಭದ್ರತೆ, ಜನಮನದಲ್ಲಿ ತುಂಬಿದ ಹೆದರಿಕೆ, ಹಿಂಸಾಮಯ ವಾತಾವರಣ, ಅಲ್ಲಿಯ ಕವಿಗಳನ್ನು ಕೆಣಕಿರುವಂತೆ ಅಂಬಲಿಗೆಯವರನ್ನು ಅದು ಕಾಡಿ ಕಾವ್ಯ ಕಟ್ಟಲು ಕಾರಣವಾಗಿದೆ. ಹೀಗಾಗಿ ಅಲ್ಲೆಲ್ಲ ಆಯಾ ಜನರ ಸಂಸ್ಕೃತಿ, ಬದುಕಿನ ವಿಧಾನ, ನಂಬಿಕೆ, ಸಂಪ್ರದಾಯ, ಆತಂಕವಾದ ಛಾಯೆ ಭೀತಿ ಮುಂತಾದ ವಿಷಯಗಳನ್ನು ಅವರು ತುಂಬಾ ಮನ ಮುಟ್ಟುವಂತೆ ನಿರೂಪಿಸಿದ್ದಾರೆ. ಹೀಗಾಗಿ ತನ್ನ ದೇಶದ ಪರಿಸರವನ್ನು ಸಮಾಜವನ್ನು ಸೂಕ್ಷ್ಮವಾಗಿ ನಿರೀಕ್ಷಿಸುವ ಡಾ. ಅಂಬಲಗೆಯವರು ಅವುಗಳಿಗೆ ಪ್ರತಿಕ್ರಿಯಿಸಿದ್ದು ಅವರ ವೈಚಾರಿಕ ಪ್ರಜ್ಞೆಗೆ ಸಾಕ್ಷಿಯಾಗಿದೆ ಎನ್ನಬಹುದು.

ಅಂಬಲಗಿಯವರ ಕಾವ್ಯದಂತೆ ಅವರ ಕಾವ್ಯಾನುವಾದಗಳಲ್ಲಿ ಕುರಿತು ಬಂಡಾಯದ ಪ್ರಜ್ಞೆಯ ಕವಿತೆಗಳಿದ್ದು, ಅವು ತುಂಬಾ ಪರಿಣಾಮಕಾರಿಯಾಗಿ ಮೂಡಿ ಬಂದಿವೆ. ಅಲ್ಲಿ ಅವರು ತೋರಿರುವ ದಿಟ್ಟತನ, ಗ್ರಾಮೀಣ ಭಾಷಾ ಬಳಕೆ, ನಿರೂಪಣೆಗಳಲ್ಲಿಯ ನಿಖರತೆ, ಸಹಜತೆ ಹಾಗೂ ಸರಳತೆಗಳು ತಮಗೆ ತಾವೇ ಅಲಂಕಾರಗಳಾಗಿ ನಿಂತು ಅಭಿವ್ಯಕ್ತಗೊಂಡಿವೆ. ಪ್ರಸ್ತುತ ಬದುಕಿನ ವಾಸ್ತವ ಸತ್ಯವನ್ನು ಎತ್ತಿಕೊಂಡು ಸಮಸ್ಯೆಗಳಾಗಿ ನಿಂತಿರುವ ಅವುಗಳ ಮೂಲಕ ಜನರಲ್ಲಿ ಪ್ರಗತಿಪರ ಮನೋಧರ್ಮವನ್ನು ಬೆಳೆಸುವ ರೀತಿ

ಇಲ್ಲಿ ಎದ್ದುಕಾಣುತ್ತದೆ. ಆ ನಿಟ್ಟಿನಲ್ಲಿ ಅವರ ಪ್ರಯತ್ನ ತುಂಬಾ ಮಹತ್ವದ್ದಾಗಿದ್ದು, ಅದರಲ್ಲಿ ಅಂಬಲಗೆಯವರು ಯಶಸ್ಸು ಗಳಿಸಿದ್ದಾರೆ ಎನ್ನಬಹುದು.

ಅನುವಾದಗಳ ಮೂಲಕ ಡಾ. ಕಾಶೀನಾಥ ಅಂಬಲಗೆಯವರು ನಮ್ಮ ದೇಶದ ಇನ್ನೊಂದು ಪರಿಸರವನ್ನು ಕನ್ನಡಿಗರಿಗೆ ಅರ್ಥೈಸಲು ಪ್ರಯತ್ನಿಸಿದ್ದು ತುಂಬಾ ಮಹತ್ವದ ಸಂಗತಿ ಎನ್ನಬಹುದು. ಈ ದೃಷ್ಟಿಯಲ್ಲಿ ಅವರ ಕಾವ್ಯಾನುವಾದಗಳು ಕನ್ನಡದ ಅನುವಾದ ಸಾಹಿತ್ಯ ಪ್ರಪಂಚಕ್ಕೆ ತಮ್ಮದೇ ಆದ ಕಾಣಿಕೆಯನ್ನು ನೀಡುತ್ತಿವೆ. ವಾಸ್ತವದಲ್ಲಿ ಮಾನವನ ಬದುಕು ಕಳೆದುಕೊಳ್ಳುತ್ತಿರುವ ಮಾನವೀಯತೆಯೆಡೆಗೆ ಬೆರಳು ಮಾಡಿ ತೋರಿಸಿ ಮತ್ತೆ ಮತ್ತೆ ಅದನ್ನು ಉಳಿಸಿಕೊಳ್ಳುವಂತೆ ಹೇಳುವ ಪ್ರಯತ್ನವನ್ನು ಅವು ಮಾಡುತ್ತಿವೆ. ಸಮಾಜವಾದಿ ಮನುಸ್ಸುಳ್ಳ ಕವಿಯೊಬ್ಬನ ಈ ಪ್ರಯತ್ನವು ಮೂಲಭೂತವಾದದ ಕೊಳಕುತನವನ್ನು ತೊಳೆಯಲು, ಅಹಿಂಸಾ ಪ್ರವೃತ್ತಿಯನ್ನು ಬೆಳೆಸಲು ಸಹಾಯ ಮಾಡುವುದರೊಂದಿಗೆ, ಆ ಗುಣಗಳನ್ನು ಬೆಳೆಸಲು ಕಾವ್ಯ ಕಟ್ಟಿವೆ. ಇಲ್ಲೆಲ್ಲ ಡಾ. ಅಂಬಲಗೆಯವರು ಎಲ್ಲ ನೋವು, ಆಕ್ರೋಶ, ಬಂಡಾಯಗಳನ್ನು ಅವುಗಳ ನೈಸರ್ಗಿಕ ಕಾಣಿಕೆಗಳಿಂದ ಮುಕ್ತಗೊಳಿಸಿ, ಕಾವ್ಯವಾಗಿಸುವಲ್ಲಿ ತಮ್ಮ ಪ್ರತಿಭೆಯನ್ನು ಮೆರೆದಿದ್ದಾರೆ ಎನ್ನಬಹುದು.

ಡಾ. ಕಾಶಿನಾಥ ಅಂಬಲಗೆಯವರ ಜೀವನ ಚರಿತ್ರೆ, ವ್ಯಕ್ತಿತ್ವ ಹಾಗೂ ಅವರ ಕಾವ್ಯಾನುವಾದಗಳನ್ನು ಅವಲೋಕಿಸಿದಾಗ ಹೇಳಬಹುದಾದ ಮಾತೆಂದರೆ ಅವರೊಬ್ಬ ಹೈದ್ರಾಬಾದ ಕರ್ನಾಟಕದ ಪ್ರಬುದ್ಧ ಬಂಡಾಯ ಕವಿಯಾಗಿ ಕಂಡುಬರುವಂತೆ ಪ್ರಖರ ವಿಚಾರವಾದಿ ಹಿಂಸಾವಿರೋಧಿ ವ್ಯವಸ್ಥೆ ವಿರೋಧಿ ಅನುವಾದ ಕವಿಯಾಗಿ ಕಂಡುಬರುತ್ತಾರೆ. ಅವರ ಕಾವ್ಯಾನುವಾದಗಳು ಅಧ್ಯಯನ ಯೋಗ್ಯವಾಗಿದ್ದು, ಅವುಗಳಲ್ಲಿಯ ಸಾಮಾಜಿಕ ಪ್ರಜ್ಞೆ, ಸರಳ ಶೈಲಿ, ಸಹಜ ಅಭಿವ್ಯಕ್ತಿ, ಬಿದಿರಿ ಭಾಷೆಯ ಪಡಿನುಡಿ, ಪ್ರಗತಿಶೀಲ ಚಿಂತನೆ, ಜೀವಪರವಾದ ಕಾಳಜಿಗಳು ಓದುಗರ ಹೃದಯಕ್ಕೆ ಮುಟ್ಟುವಂತೆ ಅಭಿವ್ಯಕ್ತವಾಗಿದ್ದು ಅವುಳಗನ್ನು ಅವರ ಬಹುತೇಕ ಕವನಗಳಲ್ಲಿ ಗುರುತಿಸಬಹುದಾಗಿದೆ.

ಒಟ್ಟಿನಲ್ಲಿ ಈ ಅನುವಾದಿತ ಕವನಗಳು ಅಪಾರ ಮಾಧುರ್ಯ ಆಲೋಚನಾ ಮಾಧುರ್ಯ ಎರಡನ್ನೂ ಮೈಗೂಡಿಸಿಕೊಂಡಿವೆ. ‘‘ಅನುವಾದಕ್ಕೆ ಆಯ್ದುಕೊಂಡಿರುವ ಕವನಗಳ ಸಂದರ್ಭದಲ್ಲಿ ತೋರಿದ ಆಯ್ಕೆಯ ಪ್ರಜ್ಞೆ, ಬಳಸಿದ ಭಾಷೆ ಇತ್ಯಾದಿ ಡಾ. ಅಂಬಲಗಿಯವರ ಭೂತ–ಭವಿಷ್ಯತ್ತಿನ ಸಂಧಿಯಲ್ಲಿ ಎಚ್ಚರದಿಂದ ನಿಂತು ಚರಿತ್ರೆಯ ಈ ಕ್ಷಣಕ್ಕೆ ಸ್ಪಂದಿಸುತ್ತಿರುವ ಒಬ್ಬ ಉದ್ದೇಶಪೂರ್ಣ ಜೀವಂತ ಕವಿ ಎಂಬುದನ್ನು

ರುಜುವಾತುಗೊಳಿಸುತ್ತವೆ'[೩] ಎಂಬ ರಾಹು ಅವರ ಬೆನ್ನುಡಿಯನ್ನು ನಾವಿಲ್ಲಿ ಒಪ್ಪಿಕೊಳ್ಳಬಹುದಾಗಿದೆ. ಎಂದು ಹೇಳುತ್ತಾ ಅಂಬಲಗೆಯವರ ಅನುವಾದ ಸಾಹಿತ್ಯವನ್ನು ಅಧ್ಯಯನ ಮಾಡುವ ಸಾಹಿತಿಗಳಿಗೆ ಈ ಕಿರುಪ್ರಬಂಧ ಸಾಧ್ಯವಾದಷ್ಟು ಮಾರ್ಗದರ್ಶನ ಮಾಡಬಹುದೆಂದು ನಾನಿಲ್ಲಿ ಆಶಿಸುತ್ತೇನೆ.

---

೩) ಕೋಗಿಲೆ ಅಳುತಿದೆ – ಡಾ. ಕಾಶಿನಾಥ ಅಂಬಲಗೆ – ಬೆನ್ನುಡಿಯಲ್ಲಿ

## ಅನುಬಂಧ

- ಕವಿ [illegible] ಪರಿಚಯ
- ಭಾವಚಿತ್ರಗಳು
- ಗ್ರಂಥ ಋಣ

# ಡಾ. ಕಾಶೀನಾಥ ಅಂಬಲಗೆಯವರ ವ್ಯಕ್ತಿ ಕಿರು ಪರಿಚಯ

೧. ಹೆಸರು : ಡಾ. ಕಾಶೀನಾಥ ಅಂಬಲಗೆ

೨. ಜನ್ಮ ದಿನಾಂಕ, ಊರು : ೧೦/೦೭/೧೯೪೭, ಮುಚಳಂಬಿ (ಬೀದರ ಜಿಲ್ಲೆ, ಬಸವಕಲಾಕ ತಾಲ್ಲೂಕು)

೩. ಶಿಕ್ಷಣ : ಎಂ.ಎ (ಕನ್ನಡ), ಎಂ.ಎ (ಹಿಂದಿ), ಬಿ.ಎಡ್ ಪಿಎಚ್.ಡಿ

೪. ಹುದ್ದೆ ಅನುಭವ : ೨೧ ವರ್ಷ ಪದವಿ ಮಹಾವಿದ್ಯಾಲಯ, ೧೨ ವರ್ಷ ವಿಶ್ವವಿದ್ಯಾಲಯ

೫. ಸಂಶೋಧನಾ ಅನುಭವ : ೩ ಪಿಎಚ್.ಡಿ., ೭ ಎಂ.ಫಿಲ್.

೬. ನಿವೃತ್ತಿ : ೩೧ನೇ ಜುಲೈ ೨೦೦೭

೭. ಪ್ರಕಟಣೆಗಳು :

ಕನ್ನಡ

೧. ಮೂವತ್ತೈದು ಕವನಗಳು, (ಕಾವ್ಯ)
೨. ಇನ್ನಷ್ಟು ಕವನಗಳು (ಕಾವ್ಯ)
೩. ಹುಲ್ಲ ಮೇಲಿನ ಹನಿಗಳು (ಮಿನಿಕವಿತೆ)
೪. ಕೌದಿ (ಕಾವ್ಯ)
೫. ಸಮಕಾಲೀನ ಪಂಜಾಬಿ ಕವಿತೆಗಳು (ಕಾವ್ಯ ಅನು. ಕರ್ನಾಟಕ ಸಾಹಿತ್ಯ ಅಕಾಡೆಮಿ)
೬. ಕೋಗಿಲೆ ಅಳುತಿದೆ (ಕಾವ್ಯ. ಅನು)
೭. ಓದಿ ಅಳುವುದು (ಅನು. ಹಿಂದಿ ಪ್ರಗತಿಪರ ಕವಿತೆಗಳು)
೮. ಕಬೀರದಾಸರು (ಕರ್ನಾಟಕ ಸಾಹಿತ್ಯ ಅಕಾಡೆಮಿ)
೯. ಶಿವಶರಣ ಪಾಟೀಲ ಜವಳಿ ಕವಿಃ ವ್ಯಕ್ತಿ ಕೃತಿ (ಸಂ.)
೧೦. ದಾಸೋಹ (ರಂಗ ಶಿಬಿರ ಸ್ಮರಣ ಸಂಚಿಕೆ, ಸಂ.)
೧೧. ಅಧ್ಯಕ್ಷೀಯ ಭಾಷಣ (ಬೀದರ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ)
೧೨. ಸೌಂದರ್ಯ ಶಾಸ್ತ್ರ (ಅನು. ಕರ್ನಾಟಕ ಲಲಿತ ಕಲಾ ಅಕಾಡಮಿ, ಬೆಂಗಳೂರು)
೧೩. ಮಹಿಳಾ ವಚನ (ಸಂ.)
೧೪. ಸಫ್ದರ್ ಹಾಶ್ಮಿಯವರ ಮಕ್ಕಳ ನಾಟಕಗಳು (ಅನು)
೧೫. ಶಬ್ದದ ಬೆಡಗು (ಸಂ)

೧೬. ಶರಣರು ಹಾಗೂ ಸಂತರ ಸಾಮಾಜಿಕ ಕಾಳಜಿ (ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು)

೧೭. ಶರಣರು ಹಾಗೂ ಸಂತರ ಆದರ್ಶ ಸಮಾಜ (ಪ್ರಸಾರಾಂಗ, ಗು.ವಿ.ಗು)

೧೮. ರಾಮಜಿ ಜಾಗ್ರತನಾದ (ಅನು. ಎನ್‌ಬಿಟಿ ದೆಹಲಿ)

೧೯. ಚುಳುಕಾದಿರಯ್ಯ (ಕಾವ್ಯ)

೨೦. ಮೂವತ್ತಕ್ಕೆ ಮುನ್ನೂರು – ಮಿನಿಗವನ

೨೧. ಬೇವು–ಬೆಲ್ಲ–ಮಿನಿಗವನ

೨೨. ಶರಣು ಶರಣಾರ್ಥಿ ಗಜಲಗಳು

೨೩. ಹಾಡುಗಳು ಉಳದಾವ

೨೪. ಶರಣ ಸಾಹಿತ್ಯ ಮತ್ತು ಸಂತ ಸಾಹಿತ್ಯ : ಜನಪರ ಚಿಂತನೆಗಳು

ಹಿಂದಿ

೨೫. ಅಧೂರೆ ಶಬ್ದ (ಕವಿತೆ ನವರಾಜ ಪ್ರಕಾಶನ, ದೆಹಲಿ (೩ ಪ್ರಶಸ್ತಿ ಪಡೆದಿದೆ. ಕೇಂದ್ರ ಸರ್ಕಾರದ ಎಚ್.ಆರ್.ಡಿ ಕೇಂದ್ರೀಯ ಹಿಂದಿ ನಿರ್ದೇಶನಾಲಯದ ೫೦ ಸಾವಿರದ ಪ್ರಶಸ್ತಿ, ಬೆಂಗಳೂರು ವಿಶ್ವವಿದ್ಯಾಲಯದ ಮಹಾತ್ಮಾಗಾಂಧಿ ಹಿಂದಿ ಪುರಸ್ಕಾರ, ಗುಲಬರ್ಗಾ ವಿಶ್ವವಿದ್ಯಾಲಯದ ರಾಜ್ಯೋತ್ಸವ ಪುರಸ್ಕಾರ)

೨೬. ಆಧುನಿಕ ಹಿಂದಿ ಕಾವ್ಯ ಪ್ರಕಾಶನ (ಬಿ.ಕಾಂ. ಪಠ್ಯ)

೨೭. ಶರಣ ಔರ ಸಂತಃ ಸಾಮಾಜಿಕ ಚಿಂತನ

೨೮. ಬಸವಚೇತನಾ (ಅನು)

೨೯. ಬಸವೇಶ್ವರ : ಕಾವ್ಯ ಶಕ್ತಿ ಔರ ಸಾಮಾಜಿಕ ಶಕ್ತಿ (ಲೋಕಭಾರತಿ, ಇಲಾಹಾಬಾದ)

೩೦. ಸಿದ್ದರಾಮೇಶ್ವರಕೆ ಚುನೆ ಹುವೆ ೧೦೮ ವಚನ (ಅನು)

೩೧. ಶಿವಯೋಗಿ ಸದ್ದರಾಮೇಶ್ವರ (ಅನು)

೩೨. ಬಸವಾದಿ ಶರಣೊಂಕೆ ಸಾಹಿತ್ಯಕೀ ಸಾಮಾಜಿಕ ಚೇತನಾ

೩೩. ಬಾರವಿ ಸದಿಕೀ ಕವಿತ್ರಿ ಅಕ್ಕಮಹಾದೇವಿ ಔರ ಸ್ತ್ರೀ ವಿಮರ್ಶ (ರಾಜಕಮಲ ದೆಹಲಿ(

೩೪. ಬಾರವಿ ಸದಿಕೀ ಕವಿತ್ರಿಯಾ ಔರ ಸ್ತ್ರೀ ವಿಮರ್ಶ (ರಾಜಕಮಲ ದೆಹಲಿ)

೩೫. ವಚನ ಸಾಹಿತ್ಯ ಔರ ಸಂತ ಸಾಹಿತ್ಯ ಕಾ ಸಮಾಜಶಾಸ್ತ್ರ(ರಾಜಪಾಲ ದೆಹಲಿ)

೩೬. ಚಂದ್ರಗಿರಿ ಕೆ ಕಿನಾರೆ (ಕಿತಾಬ ಘರ ದೆಹಲಿ)

೩೭. ಶ್ರೀ ಸಿದ್ಧರಾಮೇಶ್ವರ ಜೀವನ ವಿಚಾರ ವಚನ

ಅನುವಾದಗಳು :

ಕನ್ನಡದಿಂದ ಹಿಂದಿಗೆ :

೧. ಲಂಕೇಶರ ನಾಟಕ ಕ್ರಾಂತಿ ಬಂತು ಕ್ರಾಂತಿ

೨. ಸಾರಾ ಅಬೂಬಕರ ಅವರ ಕಾದಂಬರಿ ಚಂದ್ರಗಿರಿ ನದಿಯ ತೀರದಲ್ಲಿ

೩. ಜಿ.ಎಸ್. ಶಿವರುದ್ರಪ್ಪ, ಕಣವಿ, ರಂಜಾನ ದರ್ಗಾ ಅವರ ಕವಿತೆಗಳು ಕೇಂದ್ರ ಸಾಹಿತ್ಯ ಅಕಾಡೆಮಿಯ ಸಮಕಾಲೀನ ಭಾರತೀಯ ಸಾಹಿತ್ಯಕ್ಕಾಗಿ

೪. ಜಿ.ಎಸ್.ಎಸ್. ಕಣವಿ, ಚಂಪಾ, ಶಾಂತರಸ, ಅಲ್ಲಮಪ್ರಭು ಬೆಟ್ಟದೂರು, ಶೈಲಜಾ ಉಡಚಣ, ಅಂಬಲಗೆ ಕವಿತೆಗಳು ಪಂಜಾಬಿ ಪತ್ರಿಕೆಗಾಗಿ ಹಿಂದಿಗೆ

೫. ವಚನ (ಶರಣ ವಚನಗಳು ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು)

೬. ಹಲವಾರು ನಾಟಕಗಳು, ರೂಪಕಗಳು ಹಿಂದಿಗೆ ಆಕಾಶವಾಣಿ ರಾಷ್ಟ್ರೀಯ ಸ್ಪರ್ಧೆಗಾಗಿ

೭. ಸದ್ಯ: ಶೂನ್ಯ ಸಂಪಾದನೆ (ಡಾ. ತಿಪ್ಪೇಸ್ವಾಮಿ, ಡಾ. ಪ್ರಭಾಶಂಕರ ಪ್ರೇಮಿ ಇವರೊಡನೆ–ಬಸವ ಸಮಿತಿಗಾಗಿ)

೮. ೩೦ ಕನ್ನಡ ಕವಿತೆ ಯುಗಸ್ಪಂದನ ದೆಹಲಿ ಹಿಂದಿ ಸಾಹಿತ್ಯ ಪತ್ರಿಕೆಗಾಗಿ

ಹಿಂದಿಯಿಂದ ಕನ್ನಡಕ್ಕೆ :

೧. ಡಾ. ರಾಮಧಾರಿ ಸಿಂಹ ದಿವಾಕರ, ಕೇಶವ, ಬಲರಾಮರ ಕಥೆಗಳು

೨. ಪಂಜಾಬಿ, ಗುಜರಾತಿ, ಬಂಗಾಲಿ ಕವಿತೆಗಳು (ಹಿಂದಿ ಮೂಲಕ)

೩. ಅಂಬಲಗೆ ಕವಿತೆಗಳು ಬೇರೆ ಬೇರೆ ಭಾಷೆಗಳಿಗೆ : ಪಂಜಾಬಿ (ಸಿರನಂವಾ, ಪ್ರೀತಲಡಿ) ಉರ್ದು (ಶಾಚುರ್ ಮುಂಬಯಿ), ಬಂಗಾಳಿ (ಅನುವಾದ ಪತ್ರಿಕೆ, ಕಲ್ಕತ್ತ)

೮. ಸಾಹಿತ್ಯ ಸಮ್ಮೇಳನ, ಗೋಷ್ಠಿ, ಶಿಬಿರಗಳಲ್ಲಿ :

೧. ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಹುಬ್ಬಳ್ಳಿ, ಹಾಸನ, ಬೀದರ.

೨. ರಾಜ್ಯ ಮಟ್ಟದ ಬಂಡಾಯ ಸಾಹಿತ್ಯ ಸಮ್ಮೇಳನ ಬಿಜಾಪುರ, ದಾವಣಗೆರೆ, ಗಾಣಗಾಪುರ, ಧಾರವಾಡ

೩. ಕೇಂದ್ರ ಹಿಂದಿ ನಿರ್ದೇಶನಾಲಯದ ನವ ಹಿಂದಿ ಲೇಖಕ ಶಿಬಿರ ವಾಸ್ಕೊ. ಗೋವಾ

೪. ಕರ್ನಾಟಕ ಸಾಹಿತ್ಯ ಅಕಾಡಮಿ ಬೆಂಗಳೂರು ಅನುವಾದ ಕಮ್ಮಟ, ಬೆಂಗಳೂರು

೫. ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು ವತಿಯಿಂದ ಉತ್ತರ ಪ್ರದೇಶ ರಾಜ್ಯದ ಸಾಹಿತ್ಯ ಪ್ರವಾಸ

೬. ಗೋವಾ ವಿಶ್ವವಿದ್ಯಾಲಯದಲ್ಲಿ ಸಮಕಾಲೀನ ಕಾದಂಬರಿ ಹಾಗೂ ಸ್ತ್ರೀ ವಿಮರ್ಶೆ ರಾಷ್ಟ್ರೀಯ ವಿಚಾರ ಗೋಷ್ಠಿ

೭. ಕೇಂದ್ರಿಯ ಹಿಂದಿ ನಿರ್ದೇಶನಾಲಯ ದೆಹಲಿಯಲ್ಲಿ ಹಿಂದಿಯವರಿಗಾಗಿ ಕನ್ನಡ ಕಲಿಗೆ ಗ್ರಂಥದ ಪರಾಮರ್ಶೆಯ ವಿಶೇಷಜ್ಞ ಸಮಿತಿಯಲ್ಲಿ

೮. ಯು.ಜಿ.ಸಿ. ಸಂಶೋಧನ ಯೋಜನೆಗಳ ಮಂಜೂರಾತಿ ಏಕಸದಸ್ಯ ಉನ್ನತ ಸಮಿತಿ, ಚೆನ್ನೈ

೯. ಕುವೆಂಪು ಹೆರಿಟೇಜ್ – (ರಾಷ್ಟ್ರೀಯ ಗೋಷ್ಟಿ–ನವದೆಹಲಿ)

೯. ಸದಸ್ಯತ್ವ, ಸಂಪಾದಕತ್ವ ಇತ್ಯಾದಿ :

೧. ಕರ್ನಾಟಕ ಸಾಹಿತ್ಯ ಅಕಾಡೆಮಿ ಸದಸ್ಯ ೧೯೯೫–೯೮

೨. ಅಧ್ಯಕ್ಷ, ಉಪಾಧ್ಯಕ್ಷ, ಕಾರ್ಯಕಾರಿ ಸಮಿತಿ ಸದಸ್ಯ ಸಮುದಾಯ ಕಲ್ಬುರ್ಗಿ

೩. ಜಿಲ್ಲಾ ಜ್ಞಾನವಿಜ್ಞಾನ ಜಾತಾ ಸಮಿತಿ ಕಲ್ಬುರ್ಗಿ ಉಪಾಧ್ಯಕ್ಷ

೪. ಸದ್ಯ ಸದಸ್ಯ ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು

೫. ಅತಿಥಿ ಸಂಪಾದಕ – ಯುಗಸ್ಪಂದನ ಹಿಂದಿ ಸಾಹಿತ್ಯ ಪತ್ರಿಕೆ, ದೆಹಲಿ.

೬. ಸಂಪಾದಕ ಮಂಡಲಿ ಸದಸ್ಯ, 'ಬಸವಮಾರ್ಗ' ಹಿಂದಿ ತ್ರೈಮಾಸಿಕ, ಬಸವ ಸಮಿತಿ ಬೆಂಗಳೂರು

೧೦. ಪುರಸ್ಕಾರ ಪ್ರಶಸ್ತಿಗಳು :

೧. ರಾಜ್ಯೋತ್ಸವ ಪುರಸ್ಕಾರ – ಇನ್ನಷ್ಟು ಕವನಗಳು ಕವಿತೆ ಸಂಕಲನಕ್ಕೆ, ಗುಲಬರ್ಗಾ ವಿಶ್ವಿದ್ಯಾಲಯ

೨. ಡಾ. ಮಲ್ಲಿಕಾರ್ಜುನ ಮನ್ಸೂರ ಪ್ರತಿಷ್ಠಾನ ಪುರಸ್ಕಾರ ರಾಯಚೂರು 'ಕೌದಿ' ಕವನ ಸಂಕಲನಕ್ಕೆ

೩. ಪದ್ಮಶ್ರೀ ಡಾ. ಲಕ್ಷ್ಮಿನಾರಾಯಣ ದುಬೆ ಸ್ಮೃತಿ ಸಸ್ಮಾ – ಪಾನಿಪತ್ (ಹರಿಯಾಣ)

೪. 'ಅಧೂರೆ ಶಬ್ದ' ಹಿಂದಿ ಕವನ ಸಂಕಲನಕ್ಕೆ ೩ ಪುರಸ್ಕಾರಗಳು ಕೇಂದ್ರ ಸರ್ಕಾರದ ಎಚ್‌ಆರ್‌ಡಿ ಕೇಂದ್ರೀಯ ಹಿಂದಿ ನಿರ್ದೇಶನಾಲಯದ ೫೦ ಸಾವಿರ ಪ್ರಶಸ್ತಿ, ಬೆಂಗಳೂರು ವಿಶ್ವವಿದ್ಯಾಲಯದ ಮಹಾತ್ಮಗಾಂಧಿ ಹಿಂದಿ ಪುರಸ್ಕಾರ, ಗುಲಬರ್ಗಾ ವಿಶ್ವವಿದ್ಯಾಲಯದ ರಾಜ್ಯೋತ್ಸವ ಪುರಸ್ಕಾರ.

೧೧. ವಿಶೇಷ : ಬೀದರ ನಾಲ್ಕನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ೧೯೯೪.


ನಿವೃತ್ತ ಪ್ರಾಧ್ಯಾಪಕರು ಹಾಗೂ ಅಧ್ಯಕ್ಷರು,
ಹಿಂದಿ ಅಧ್ಯಯನ ವಿಭಾಗ,
ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

**ವಿಳಾಸ :**

ಡಾ. ಕಾಶಿನಾಥ ಅಂಬಲಗೆ
'ಬೇವು-ಬೆಲ್ಲ' ೮-೩೮, ಜಯನಗರ,
ವಿಶ್ವವಿದ್ಯಾಲಯ ಮಾರ್ಗ, ಗುಲಬರ್ಗಾ-೫೮೫ ೧೦೫.
ದೂರವಾಣಿ : (ಕಚೇರಿ) ೦೮೪೭೨-೨೬೩೨೬೯
(ಮನೆ) ೦೮೪೭೨-೨೪೯೬೬೦ (ಮೊ) ೦೯೪೪೯೬೮೯೧೬೨.

ಡಾ. ಕಾಶಿನಾಥ ಅಂಬಲಗೆಯವರಿಗೆ ಹರಿದು ಬಂದ ಪ್ರಶಸ್ತಿ ಪುರಸ್ಕಾರಗಳು



ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪನವರೊಂದಿಗೆ




೬೦ನೇ ಸ್ವಾತಂತ್ರ್ಯೋತ್ಸವ ಸವಿ ನೆನಪಿಗಾಗಿ ಅಯೋಜಿಸಿದ ಕವಿಗೋಷ್ಠಿಯಲ್ಲಿ ಡಾ. ಕಾಶಿನಾಥ ಅಂಬಲಗೆಯವರನ್ನು ಕಾಣಬಹುದು




ಪ್ರಧಾನಮಂತ್ರಿ ನಿವಾಸ ದೆಹಲಿಯಲ್ಲಿ ಅಧೂರೆ ಶಬ್ದ ಕೃತಿಗೆ ಪುರಸ್ಕಾರದ ಕ್ಷಣ



ಭಾಲ್ಕಿಯಲ್ಲಿ ಜರುಗಿದ ಬೀದರ ನಾಲ್ಕನೆ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಅಧ್ಯಕ್ಷೀಯ ಭಾಷಣ ಮಾಡುತ್ತಿರುವ ಸಂದರ್ಭದಲ್ಲಿ ವೇದಿಕೆ ಮೇಲೆ ಡಾ. ಕಾಶಿನಾಥ ಅಂಬಲಗೆಯವರು



ಕುಟುಂಬದ ಸದಸ್ಯರೊಂದಿಗೆ ಡಾ. ಕಾಶಿನಾಥ ಅಂಬಲಗೆಯವರು

# ಆಕರ ಗ್ರಂಥಗಳು


| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರು/ಸಂಪಾದಕರು | ವರ್ಷ |
|---|---|---|---|
| ೧. | ಬೀದರ ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆ 'ಬೀದರ ಜಿಲ್ಲಾದರ್ಶನ' | ಡಾ. ಎಲ್.ಆರ್. ಕುಲಕರ್ಣಿ | ೧೯೯೫ |
| ೨. | 'ಬೀದರ ಜಿಲ್ಲಾದರ್ಶನ' | ಡಾ. ಸೋಮನಾಥ ಯಾಳವಾರ<br>ಡಾ. ಪ್ರೇಮಾ ಸಿರ್ಸೆ | ೨೦೦೫ |
| ೩. | 'ಬೀದರ ಜಿಲ್ಲಾದರ್ಶನ' | ಸಂ. ಜಗನ್ನಾಥ ಹೆಬ್ಬಾಳೆ | ೧೯೯೭ |
| ೪. | 'ಸಾಹಿತ್ಯದಲ್ಲಿ ಪ್ರಗತಿ' | ವಿ.ಕೃ ಗೋಕಾಕ | ೧೯೯೪ |
| ೫. | 'ಸಾಹಿತ್ಯ ವಿಮರ್ಶೆ' | ಆರ್.ಸಿ. ಹಿರೇಮಠ | ೧೯೯೬ |
| ೬. | ಚುಳುಕಾದಿರಯ್ಯ | ಡಾ. ಕಾಶಿನಾಥ ಅಂಬಲಗಿ | ೨೦೦೬ |
| ೭. | 'ನಮ್ಮ ಅನುವಾದಿತ' | ಡಾ. ಎಂ.ಎಸ್. ಲಠ್ಠೆ | ೨೦೦೩ |
| ೮. | 'ಅನುವಾದಿತ' | ಡಾ. ಜಿ.ಎಸ್. ಕುಳ್ಳಿ | ೧೯೭೫ |
| ೯. | ಸಪ್ಧರ್ ಹಾಶ್ಮಿಯವರ ಮಕ್ಕಳ ನಾಟಕಗಳು | ಡಾ. ಕಾಶಿನಾಥ ಅಂಬಲಗೆ | ೨೦೦೨ |
| ೧೦. | 'ಓದಿ ಅಳುವುದು' | ಡಾ. ಕಾಶಿನಾಥ ಅಂಬಲಗೆ | ೨೦೦೨ |
| ೧೧. | 'ಪುಲಿಗೆರೆಯ ಆದಯ್ಯ' (ಅನುವಾದಿತ ಕವನ ಸಂಕಲನ) | ಡಾ. ಸೋಮನಾಥ ಯಾಳವಾರ | ೧೯೯೩ |

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರು/ಸಂಪಾದಕರು | ವರ್ಷ |
|---|---|---|---|
| ೧೨. | ಕೋಗಿಲೆ ಅಳುತಿದೆ (ಅನುವಾದ ಕವನ ಸಂಕಲನ) | ಡಾ. ಕಾಶಿನಾಥ ಅಂಬಲಗೆ | ೧೯೯೩ |
| ೧೩. | 'ಬೀದರ ಜಿಲ್ಲಾಸಾಹಿತ್ಯಾವಲೋಕನ' | ಡಾ. ಜಗನ್ನಾಥ ಹೆಬ್ಬಾಳೆ | ೧೯೯೮ |
| ೧೪. | ಕಾವ್ಯದ ಅನುವಾದ ಒಂದು ಚಿಂತನೆ | ಶ್ರೀ ಬಿ.ಸಿ. ರಾಮಚಂದ್ರ ಶರ್ಮಾ | -- |
| ೧೫. | ಸಾಹಿತ್ಯ ಪ್ರವೇಶ | ವಿಲಿಯಂ ಹೆನ್ರಿ | ೧೯೭೪ |
| ೧೬. | ಒಂದು ಗಳಿಗೆ ಸಂಕಲನದ ಮುನ್ನುಡಿಯಲ್ಲಿ | ಚೆನ್ನವೀರ ಕಣವಿ | ೧೯೭೨ |
| ೧೭. | ಕೌದಿ (ಕಾವ್ಯ) | ಡಾ. ಕಾಶೀನಾಥ ಅಂಬಲಗಿ | -- |
| ೧೮. | ವಿಮರ್ಶಾ ಸಂಪುಟ | ಎಸ್.ಎಂ. ಹಿರೇಮಠ | ೧೯೯೩ |
| ೧೯. | ಕಲ್ಯಾಣ ನಾಡಿನ ಕೆಂಪು ಕವಿತೆಗಳು | ಚೆನ್ನಣ್ಣ ವಾಲಿಕಾರ ಬಸವರಾಜ ಸಬರದ | ೧೯೯೦ |
| ೨೦. | ಬಂಡಾಯ ಸಾಹಿತ್ಯ ಸಂವೇದನೆ | ರಂಗರಾಜ ಮನದುರ್ಗ | ೨೦೦೨ |
| ೨೧. | ನಮ್ಮ ಅನುವಾದಕ | ಪ್ರೊ.ಆರ್.ಎಂ. ಸಾಸನೂರ | -- |

